ಲಲಿತ ಸಾಹಿತ್ಯ ಮಾಲೆಯ ವರುಷ ೪, ಕುಡಿ ೩

# ಪುರುಷಾರ್ಥ

'ಶ್ರೀರಂಗ'

ಸ್ವಾತಂತ್ರ್ಯ ದಿನೋತ್ಸವ
೧೫, ಅಗಸ್ಟ ೧೯೪೭

— ಲಲಿತ ಸಾಹಿತ್ಯಮಾಲೆ —
ಧಾರವಾಡ



ಸಂಪಾದಕರು

ಗೋವಿಂದ ವೆಂಕಟೇಶ ಚುಳಕಿ

ಮಾರಾಟಗಾರರು :

ಮನೋಹರ ಗ್ರಂಥ ಭಾಂಡಾರ, ಧಾರವಾಡ — ಬೆಲೆ

ಕನ್ನಡ ಪುಸ್ತಕಾಲಯ, ಬೆಳಗಾವಿ — ೨—೦—೦



ಪ್ರಕಾಶಕರು :

ದ. ಬಾ. ಕುಲಕರ್ಣಿ
ಮ ಗ್ರಂ. ಭಾಂಡಾರ,
ಧಾರವಾಡ

ಮುದ್ರಕರು :

ಜಿ. ಆರ್. ಪಂಡಿತ
ಕೇಳಕರ ಮುದ್ರಣಾಲಯ
ಧಾರವಾಡ

## ಸಂಪಾದಕರ ಮಾತು

ಅಹಿಂಸೆ, ಅಸಹಕಾರಗಳ ಆಂದೋಲನದ ನಿಕರದ ಹೋರಾಟ ಅಖಂಡವಾಗಿ ೨೭ ವರುಷ ನಡೆದುದರ ಫಲವಾಗಿ, ಇಂದು ಭಾರತೀಯರ ಕೈಯಲ್ಲಿ ಸ್ವತಂತ್ರಾಧಿಕಾರವು ಬರುವ ಈ ಸ್ವಾತಂತ್ರ್ಯದಿನೋತ್ಸವದ ವಿಜೃಂಭಣೆಯ ಕಾಲದಲ್ಲಿ ನಮ್ಮ ಲ. ಸಾ. ಮಾಲೆಯು ರಾಜಕೀಯ ಹಿನ್ನೆಲೆಯಲ್ಲಿ, ಸ್ವತಂತ್ರ ಶೈಲಿಯಲ್ಲಿ ಬರೆಯಲಾದ ಈ 'ಪುರುಷಾರ್ಥ' ಎಂಬ ಸ್ವತಂತ್ರ ಕಾದಂಬರಿಯನ್ನು ಪ್ರಕಟಿಸಿ, ತನ್ನ ಸಾರ್ಥಕತೆಯನ್ನು ಮಾಡಿಕೊಂಡಿದೆಯೆಂದು ಹೇಳಲು ಹೆಮ್ಮೆಯೆನಿಸುತ್ತಿದೆ.

ಶ್ರೀರಂಗರು ಈ 'ಪುರುಷಾರ್ಥ'ವನ್ನು ಬರೆಯಲು ಮನಸು ಮಾಡಿದ್ದರು. ೧೫-೮-೪೭ರೊಳಗೆ ಮುದ್ರಣಗೊಳಿಸುವ ಮುದ್ರಾಲಯವೆಲ್ಲಿದ ಧಾರವಾಡದಲ್ಲಿ! ಎಂದು ವಿಚಾರ ವ್ಯಕ್ತಪಡಿಸಿದರು. ನಮ್ಮ ಮುದ್ರಣಾಲಯವಿಲ್ಲದಿದ್ದರೂ ಮುದ್ರಿಸಬಹುದೆಂಬ ಹೊಣೆ ನಾವು ಹೊತ್ತೆವು. ಅವರು ಬರೆ ಬರೆದಂತೆ ಮುದ್ರಣವೂ ಆಗುತ್ತ ಹೋಗಿ, ಇಂದು ಶ್ರೀರಂಗರ ಈ ಕಾದಂಬರಿಯು ನಮ್ಮ ವಾಚಕರ ಕೈಸೇರುತ್ತಲಿದೆ. ಅನಾದಿ ಕಾಲದಿಂದ ಭಾರತದ ದಾಸ್ಯದ ನೊಗವು ಇಂದು ಕಳಚಿ ಬಿದ್ದ ಈ ಸ್ವಾತಂತ್ರ್ಯದಿನದಲ್ಲಿ ನಮ್ಮ ವಾಚಕರಿಗೆ ಲ. ಸಾ. ಮಾಲೆಯು ಈ ಕುಸುಮವನ್ನು ನೀಡುತ್ತಿರುವದರಿಂದ ನಮ್ಮ ಪುರುಷಾರ್ಥವೂ ವ್ಯಕ್ತವಾಗದಿರದೆಂದು ನಾವು ನಂಬಿದ್ದೇವೆ.

'ಪುರುಷಾರ್ಥ' ಬರೆದು ತೋರಿಸಿದ ಶ್ರೀರಂಗರಿಗೂ, ಹೊಸ ರಾಷ್ಟ್ರಧ್ವಜದ ನಕ್ಷೆಯನ್ನು ಸಿದ್ಧಗೊಳಿಸಿ ಕೊಟ್ಟ ಕಲಾವಿದ ಶ್ರೀ. ಕೆ. ಎಸ್. ಖಸಾಫ್ಯರಿಗೂ, ಅಲ್ಪ ಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಕೇಳಕರ ಮುದ್ರಣಾಲಯದ ಶ್ರೀಮಾನ್ ಜಿ. ಆರ್. ಪಂಡಿತರಿಗೂ ನಾವು ತುಂಬಾ ಋಣಿಯಾಗಿದ್ದೇವೆ.

**ಲಲಿತ ಸಾಹಿತ್ಯಮಾಲೆ**

ಬೇಗನೆ ಅರಳಲಿರುವ

— ಮುಂದಿನ ಕುಡಿಗಳು —

## ೧ ಎರಡನೆಯ ಸಂಬಂಧ

ಶ್ರೀ. ಎನ್ಕೆ ಕುಲಕರ್ಣಿ, ಎಂ. ಎ; ಬಿ. ಟಿ.

## ೨ ಪ್ರತಿ ಸರಕಾರ

ಶ್ರೀ. ಮಿರ್ಜಿ ಅಣ್ಣಾರಾಯರು

— ಲಲಿತ ಸಾಹಿತ್ಯಮಾಲೆ, ಧಾರವಾಡ —

## ಸಂದರ್ಭಸೂಚಿ

ದೇಶದ ರಾಜಕೀಯ ಘಟನೆ; ಜೂನ ೩ಕ್ಕೆ ಬ್ರಿಟಿಶ, ಕಾಂಗ್ರೆಸ ಮತ್ತು ಲೀಗ ಪಕ್ಷಗಳು ಪರಸ್ಪರ ಸಮ್ಮತಿಯಿಂದ ಮಾಡಿಕೊಂಡ ಒಡಂಬಡಿಕೆ; ಅದರ ಪರಿಣಾಮವಾಗಿ ಇಂದು (೧೫–೮–೧೯೪೭) ಅಸ್ತಿತ್ವದಲ್ಲಿ ಒರುವ ರಾಜಕೀಯ ಅಧಿಕಾರಸ್ವಾತಂತ್ರ್ಯ ಇವುಗಳ ಬಗ್ಗೆ ಪತ್ರಿಕೆಗಳನ್ನೋದುತ್ತಿರುವ ನನ್ನಂತಹ ಸಾಮಾನ್ಯ ವಾಚಕನು ಕೂಡ ಅಜ್ಞನಾಗಿ ಉಳಿಯುವುದು ಶಕ್ಯವಾಗಿರಲಿಲ್ಲ; ಹವೆಯ ಕಣಗಳು ಕೂಡ ಚರ್ಚೆ ನಡೆಸಿವೆ ಏನೊ ಎಂಬಷ್ಟು ಚರ್ಚೆ ನಡೆಯಿತು. ವಿಶೇಷವಾಗಿ 'ಸ್ವಾತಂತ್ರ್ಯ' ಎಂಬುದರ ಬಗ್ಗೆ ಮತ್ತು ಉತ್ಸವದಿಂದ ಸಾಂಗಗೊಳಿಸುವ ಬಗ್ಗೆ ನನಗೆ ಈ ಚರ್ಚೆಯಲ್ಲಾಗಲಿ, ಬೇರೆ ಬೇರೆ ಪಕ್ಷಗಳ, ಮುಂದಾಳುಗಳ ಅಭಿಪ್ರಾಯದಲ್ಲಾಗಲಿ ಆಸಕ್ತಿ ಇದ್ದಿರಲಿಲ್ಲ. ಆದರೆ ಇಷ್ಟೊಂದು ಚಟುವಟಿಕೆ ನಡೆದುದು ಮನಸಿನ ಮೇಲೆ ಯಾವುದೊ ಒಂದು ಪರಿಣಾಮವನ್ನು ಮಾಡಿತು. ಜಾಗೃತಿಯ ಈ ವಾತಾವರಣದಲ್ಲಿ ಯಾವುದೊ ಒಂದು ಸಂನಿವೇಶ ನನಗೆ ತೀರ ಪರಿಚಿತವಾದುದೆಂದು ಭಾಸವಾಯಿತು. ಕನಸನ್ನು ಕಂಡವನಂತೆ ಇದೆಲ್ಲವನ್ನೂ ಮುಂಚೆ ಎಲ್ಲಿಯೊ ನೋಡಿದ್ದೇನೆ ಎಂದೆನಿಸಿತು. ಆಗ ಇಪ್ಪತ್ತೇಳು ವರುಷಗಳನ್ನು ದಾಟಿ ಹಿಂದೆ ಓಡಿತು ನನ್ನ ಸ್ಮರಣೆ. ನಾನು ಅದೇ ಕಾಲೇಜನ್ನು ಸೇರುವವನಿದ್ದೆ, ಮಹಾತ್ಮಾ

ಗಾಂಧಿಯವರ ಅಸಹಕಾರವು ಅದೇ ತಲೆ ಎತ್ತಿತ್ತು. ದೇಶದ ತುಂಬ ಜನ ತೆಯ ಹೃದಯವು ಉತ್ಸಾಹದಿಂದ ಕುಣಿಯುತ್ತಿತ್ತು, ತಲೆ ವಿಚಾರಗಳಿಂದ ತುಳುಕುತ್ತಿತ್ತು. ನೋಡಿದಲ್ಲೆಲ್ಲ ಜಾಗೃತಿಯ ಕಿಡಿಗಳೆ ಮಿಂಚುತ್ತಿದ್ದುವು.

ನನ್ನ ಎಳೆವಯಸ್ಸಿನ ಆ ಕಾಲದ ಸ್ಮರಣೆಯ ಫಲರೂಪವಾದ ಚಿತ್ರವೆ ಈ ಕಾದಂಬರಿ. ವಾತಾವರಣ ಒಂದನ್ನು ಬಿಟ್ಟರೆ ಮಿಕ್ಕ ಎಲ್ಲವೂ ಕಾಲ್ಪನಿಕ ವಾಗಿದೆ. ನಾಲ್ಕು ಪಾತ್ರಗಳಲ್ಲಿ ಯಾವ ಪಾತ್ರವೂ ಇಂದಿನ (ಇಲ್ಲವೆ ಅಂದಿನ) ಯಾವುದೆ ಒಂದು ವ್ಯಕ್ತಿಗೆ ಅನ್ವಯಿಸುವುದಿಲ್ಲ. ನಾಲ್ವರ ವಿಚಾರಸರಣಿಯಲ್ಲಿ ವೈಯಕ್ತಿಕವಾದ ನನ್ನ ವಿಚಾರಸರಣಿ ಎಂಬುದೂ ಇಲ್ಲ. ಕತೆಯನ್ನು ಇತಿ-ಹಾಸಾತ್ಮಕ ದೃಷ್ಟಿಯಿಂದಲೆ ನೋಡಬೇಕಾದುದು.

ಇನ್ನೊಂದು ಮಾತು. ಕಾದಂಬರಿಯ ಸಂದರ್ಭವು ಯಾವ ರೀತಿ· ನನಗೆ ಸೂಚಿತವಾಗಿದೆಯೊ ಅದರ ಕಾರಣಕ್ಕಾಗಿ ಶೈಲಿಯೂ ವಿಶಿಷ್ಟವಾಗಿದೆ· ಅಂತರ್ದೃಷ್ಟಿಯೆ ಈ ಶೈಲಿಯ ಮುಖ್ಯ ಲಕ್ಷಣವಾಗಿದೆ. ವ್ಯಕ್ತಿಗಳ ಅಂತರಂಗ ಗಳಲ್ಲಿ ಜರುಗಿದ ಘಟನೆಗಳನ್ನು, ಅದೂ ಸಂಸ್ಮರಣೆಯ ನಿಮಿತ್ತವಾಗಿ ಚಿತ್ರಿ ಸಿದ್ದರಿಂದ ಇನ್ನು ಬೇರೆ ಯಾವ ಶೈಲಿಯೂ ಶಕ್ಯವಾಗಲಿಲ್ಲ, ಸಮರ್ಪಕವೂ ಆಗುತ್ತಿರಲಿಲ್ಲ. ಪ್ರತಿಯೊಂದು ಸಲ ಈ ಗುರುತು . . . . ಬಂದಾಗ ಕಾಲ ಬದಲಾಗುವುದೆಂದು ತಿಳಿಯಬೇಕು.

ಈ ಕಾದಂಬರಿಯನ್ನು ಬರೆಯ ಬೇಕೆನ್ನಿಸಿದ್ದು ಜುಲೈ ೧೦—೧೨ ರ ಸುಮಾರಿಗೆ. ಅಗಸ್ಟ ೧೫ನೆಯ ದಿನವೆ ಪ್ರಕಟಿಸಲ್ಪಡಬೇಕೆಂದೂ ವಿಚಾರ ಬಂದಿತು. ಇಷ್ಟೊಂದು ಅಲ್ಪಾವಧಿಯಲ್ಲಿ ಅಚ್ಚುಹಾಕುವ ಅನುಕೂಲ ದೊರ ಕುವುದು ಅಶಕ್ಯ ಎಂದೆನಿಸಿತು. ಆದರೂ ಬರೆಯಲೇಬೇಕೆಂಬ ಇಚ್ಛೆ ಉತ್ಕಟ ವಾಗಿ ಪ್ರಾರಂಭಿಸಿದೆ. ಇಂಗ್ಲಿಶದಲ್ಲಿ ಹೇಳುವ Where there is a will there is a way ಎಂಬಂತೆ ಲಲಿತ ಸಾಹಿತ್ಯಮಾಲೆಯವರಿಗೆ ಅದೇ ಕಾಲಕ್ಕೆ ಇದನ್ನು ಪ್ರಕಟಿಸಬೇಕೆಂಬ ಸ್ಫೂರ್ತಿಯೂ ಬಂದಿತು. ಬರೆವಣಿಗೆ ಮತ್ತು ಅಚ್ಚುಹಾಕುವುದು ಇವೆರಡರಲ್ಲೂ ಮೇಲಾಟ ನಡೆಯಿತು. ಎಲ್ಲರೂ ಗೆದ್ದಂ ತಾಗಿದೆ ಈ ಮೇಲಾಟದಲ್ಲಿ. ಎಲ್ಲರಿಗೂ ವಂದನೆಗಳು.

೧೫—೮—೧೯೪೭ ಶ್ರೀರಂಗ

# ಪುರುಷಾರ್ಥ

ಸ್ವಾತಂತ್ರ್ಯಯುದ್ಧದ ಹಿನ್ನೆಲೆಯಲ್ಲಿ ರಚಿತವಾದ
ಕಾದಂಬರಿ

# ಒಪ್ಪೋಲೆ

(ಓದುವಾಗ ತಡೆಯಬಹುದಾದ ತಪ್ಪಿನ ತಿದ್ದುಪಡಿ)

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೨ | Confacf | Contact |
| ೧೨ | ೩ | Hopless | Hopeless |
| ೪೮ | ೫ | ಮಗ್ಗುಗಲ್ಲಿ | ಮಗ್ಗುಲಲ್ಲಿ |
| ೫೯ | ೮ | ದಾನಾಗಿಯೆ | ತಾನಾಗಿಯೆ |
| ೬೮ | ೨೦ | ಬ್ರಹಸ್ಪತಿ | ಬೃಹಸ್ಪತಿ |
| ೭೦ | ೨೪ | ತಡೆಯಲಾರದ್ದಕೆ | ತಡೆಯಲಾರದ್ದಕ್ಕೆ |
| ೮೫ | ೧೨ | ಜುಹುಸಂದಾನ | ಜುಹುಸಂಧಾನ |
| ೮೬ | ೯ | ಕೊನಗೆ | ಕೊನೆಗೆ |
| ೮೭ | ೧ | ಮೂಸು | ಮೂರು |
| ೧೦೩ | ೧೮ | ಕಾಂಗ್ರೆಸದದ | ಕಾಂಗ್ರೆಸದ |
| ೧೧೩ | ೧೧ | ವ್ರಗ | ವರ್ಗ |
| ೧೨೦ | ೨೦ | ಎಂದು | ಎಂದ |
| ೧೩೦ | ೧೧ | ಜೇಲಿಗೇ | ಜೇಲಿಗೇ |
| ೧೩೧ | ೨೫ | ಹಡುಕುವವನಂತೆ | ಹುಡುಕುವವನಂತೆ |
| ೧೩೩ | ೧೫ | ಕಣ್ಣುಗಳಿಗೆ | ಕಣ್ಣುಳಿಗೆ |
| ೧೩೫ | ೪ | ಯಾವ— | ಯಾವ ಕೆಲಸ |
| ೧೩೫ | ೨೨ | ಪತ್ರಬಿಂಬಕ್ಕೆ | ಪ್ರತಿಬಿಂಬಕ್ಕೆ |
| ೧೩೬ | ೨೬ | ಚಳವಳಿದಲ್ಲಿ | ಚಳವಳದಲ್ಲಿ |

## ೧. ಧರ್ಮ

೧

ಅಗಸ್ಟ ೧೫. ೧೯೪೭ ನೆಯ ಇಸ್ವಿ, ಕ್ರಿಸ್ತಶಕ. ಸರ್ವಜಿತ್ ಸಂವತ್ಸರ, ...ಕ ಶ್ರಾವಣ, ಕೃಷ್ಣಪಕ್ಷ ಚತುರ್ದಶಿ. ಮಾಧವನು ಇದೆಲ್ಲವನ್ನೂ ನೋಡಿ ...ಂಡನು. ಸಂವತ್ಸರವೆ ಸರ್ವಜಿತ್, ಎಂದಮೇಲೆ ಸ್ವಾತಂತ್ರ್ಯವನ್ನು ...ಟ್ಟಿರುವುದರಲ್ಲಿ ಆಶ್ಚರ್ಯವೇನು? ಆದರೂ ಮಾಧವನ ದೇಹಕ್ಕೆ ಉಲ್ಲಾಸ ಹುಟ್ಟಿರಲಿಲ್ಲ. ಕಳೆದ ಸಲ ಸೀದಾದಲ್ಲಿ ಎಲ್ಲ ಧಾನ್ಯ ಸಿಕ್ಕಿರಲಿಲ್ಲ, ಈ ಸಲ ವಾದರೂ ಸಿಕ್ಕಲಿಕ್ಕಿಲ್ಲವಲ್ಲ ಎಂಬ ಅಧೈರ್ಯದ ನೆರಳು ದೇಹದ ಮೇಲೆ ಬಿದ್ದಂತಿತ್ತು. ಹೋಗಲಿ. ಕೊನೆಗೆ ಸ್ವಾತಂತ್ರ್ಯ ಸಿಕ್ಕಿತಲ್ಲ? ಕೊನೆಗೆ! ಮಾಧವನು ವಿಚಾರ ಮಾಡುತ್ತಲೆ ಕುರ್ಚಿಯನ್ನು ಕಿಡಿಕಿಯ ಹತ್ತಿರ ಎಳೆ ದನು. ಈ ದಿನ ಬೆಳಗ್ಗೆ ಸ್ವಾತಂತ್ರ್ಯದ ಮೆರವಣಿಗೆ ಹೊರಡುವುದು; ಆ ವಿಜಯ ಯಾತ್ರೆಯ ದೃಶ್ಯವನ್ನು ಕಣ್ಣಾರೆ ನೋಡುವ ಹಟದಿಂದ ಬೆಳಗಿನ ಸಂಚಾರವನ್ನೂ ಮಾಧವನು ತಡೆದಿದ್ದನು. ಮುಂಬಯಿಯಂತಹ ನಗರ ...ಲ್ಲಿಯ ಮೆರವಣಿಗೆ ಎಂದರೆ ಬೇರೆ ಹೇಳಬೇಕೆ? ಇತ್ತಿತ್ತಲಾಗಿ ಇದ್ದು ...ೊಳ್ಳಲು ಸ್ಥಳ ದೊರೆಯುವುದು ಅಸಾಧ್ಯವಾದ್ದರಿಂದ ಮೆರವಣಿಗೆಗಳು ಪ್ರಚಂಡತರವಾಗುತ್ತಲಿವೆ. ಮಾಧವನು ಕುರ್ಚಿಯಲ್ಲಿ ಕುಳಿತುಕೊಂಡನು. ಕಿಟಿಕಿಯಲ್ಲಿ ರಾಷ್ಟ್ರಧ್ವಜದ ಕಟ್ಟಿಗೆಯನ್ನು ನಿಲ್ಲಿಸಿದ್ದನು. ಮೆರವಣಿಗೆಯ ನೋಟಕ್ಕೆ ಆ ಕಟ್ಟಿಗೆ, ಅದರ ತುದಿಗೆ ಹಾರುತ್ತಿರುವ ಪಟ ಅಡ್ಡ ಬರಬಹು ದೇನೊ ಎಂಬ ವಿಚಾರವೂ ಬಂದಿತು. ಹೋಗಲಿ, ಮೆರವಣಿಗೆ ಬಂದಾಗ ನೋಡೋಣ. ಕೊನೆಗೊಮ್ಮೆ ಕಣ್ಣಾರೆ ಸ್ವಾತಂತ್ರ್ಯದ ಮೆರವಣಿಗೆಯನ್ನು ನೋಡುವ ಭಾಗ್ಯ ಬಂದಿತಲ್ಲ–ಎಂದನು. ತನಗೇ ಆಶ್ಚರ್ಯವಾಯಿತು. 'ಕೊನೆಗೊಮ್ಮೆ' 'ಕೊನೆಗೆ' ಎಂದೇ ವಿಚಾರ ಬರುವುದಲ್ಲ? ಯಾಕೆ? ಮಾಧವ ನಿಗೆ ತನ್ನ ಇಡಿಯ ತಾರುಣ್ಯದ ಜೀವನ ನೆನಪಿಗೆ ಬಂದಿತು. ಕೊನೆಗೆ–ಎಂದ ...ೇನು? ಕೇವಲ ಇಪ್ಪತ್ತೇಳು ವರ್ಷಗಳ ಕಾಲಮಾನ. ಒಂದು ರಾಷ್ಟ್ರದ ಆಯುಷ್ಯದಲ್ಲಿ ಒಂದು ನಿಮಿಷ ಕೂಡ ಎನ್ನಿಸಲಿಕ್ಕಿಲ್ಲ. ಆದರೂ ಮಾಧವನಿಗೆ

ಆ ಇಪ್ಪತ್ತೇಳು ವರುಷಗಳು ಒಂದು ಚಿತ್ರಪಟದಷ್ಟು ಎನ್ನಿಸಿತ್ತು. ಅದ ಕ್ಕಾಗಿಯೆ 'ಕೊನೆಗೊಮ್ಮೆ' ಎಂದುಕೊಂಡನು.

. . . .

ಇಪ್ಪತ್ತೇಳು ವರುಷಗಳು! ೧೯೩೦ ನೆಯ ಇಸ್ವಿ, ಅಗಸ್ಟ ತಿಂಗಳು. ರೌದ್ರನಾಮ ಸಂವತ್ಸರ, ಅಧಿಕ ಶ್ರಾವಣ ಕೃಷ್ಣಪಕ್ಷ! ಆ ಕಾಲದಲ್ಲೂ ಮಾಧವನು ಮುಂಬಯಿಯಲ್ಲಿದ್ದನು. ಆ ದಿನವೂ ಮುಂಬಯಿಯಲ್ಲಿ ಮೆರವಣಿಗೆ. ಆದರೆ ೧೯೨೦ರ ಅಗಸ್ಟ ೧ರ ಮೆರವಣಿಗೆಯನ್ನು ಮಾಧವನು ಕಿಟಿಕಿಯಲ್ಲಿ ಕುಳಿತು ನೋಡಿರಲಿಲ್ಲ. ಆ ಮೆರವಣಿಗೆಯಲ್ಲಿಯೆ ತನ್ಮಯನಾಗಿದ್ದನು. ಲೋಕಮಾನ್ಯ ಬಾಲ ಗಂಗಾಧರ ತಿಲಕರವರ ಸ್ಮಶಾನಯಾತ್ರೆಯ ಮೆರವಣಿಗೆಯಲ್ಲಿ ಮಾಧವನೂ ತನ್ನ ಹೆಗಲಮೇಲೆ ಇಡಿಯ ದೇಶಕ್ಕಾದ ದುಃಖವನ್ನು ಹೊತ್ತುಕೊಂಡು ನಡೆದಿದ್ದನು. ಆದರೆ ದೇಶದ ನಾಯಕನ ಸ್ಮಶಾನಯಾತ್ರೆಯಲ್ಲಿ ನಡೆದಿದ್ದರೂ ಮಾಧವನಿಗೆ ಉಲ್ಲಾಸವೆನ್ನಿಸದಿದ್ದರೂ ಹುಮ್ಮಸ ಒಳಗುದಿಯುತ್ತಿತ್ತು. ಧೋ ಧೋ ಮಳೆ ಬೀಳುತ್ತಲಿದೆ; ಅದರ ಗೊಡವೆಯಿಲ್ಲದೆ ಮಾಧವನೂ ಅವನ ಮಿತ್ರರೂ ಜೊತೆಗೂಡಿ ಮಾತನಾಡುತ್ತ, ರಾಜಕೀಯವನ್ನು ಚರ್ಚಿಸುತ್ತ, ಸ್ವಾತಂತ್ರ್ಯಯುದ್ಧಕ್ಕೆ ಇನ್ನು ಯಾವ ನಾಯಕ ದೊರಕುವನೆಂದಾಗಲಿ–ನಾಯಕ ದೊರಕುವುದೆ ಕಷ್ಟವೆಂದಾಗಲಿ ವಾದಿಸುತ್ತ ನಡೆದಿದ್ದಾರೆ. 'ಮೆರವಣಿಗೆ' ಎಂದಾಗೊಮ್ಮೆ ಈ ಮಿತ್ರರ ಸ್ಮರಣೆ ಮಿಡುಕುವುದು ಮಾಧವನ ಮನಸ್ಸನ್ನು. ಮಾಧವ, ಅನಂತ, 'ಹಮ್ಮು' ಮತ್ತು ಶ್ರೀಧರ. ಈ ನಾಲ್ವರ ಜೊತೆ ಮೆರವಣಿಗೆಯ ಸಂದಣಿಯಲ್ಲಿ ಕೂಡ ತಪ್ಪುವಂತಿಲ್ಲ; ಎಂದಾದರೂ ತಪ್ಪಿದರೆ ಅದರ ಅರಿವು ಇಲ್ಲದೆ ಇವರ ವಾದ–ವಿವಾದ ಹಾಗೇ ಸಾಗುವುದೂ ತಪ್ಪುವಂತಿಲ್ಲ. ಮಾಧವನಿಗೆ ಮಾತು ಕಡಮೆ; ಮ್ಯಾಟ್ರಿಕ್‌ದಲ್ಲಿ ಮೇಲಿನ ನಂಬರು ಪಡೆದು ಕಾಲೇಜಿನಲ್ಲಿ ಶಿಷ್ಯವೃತ್ತಿಯನ್ನು ಸಂಪಾದಿಸಿಕೊಂಡಿದ್ದಾನೆ. ಅನಂತ ಅದೇ ವಯಸ್ಸಿನವ–ಸುಮಾರು ೧೬–೧೭; ಓದಿದ ಪುಸ್ತಕವನ್ನು ತತ್‌ಕ್ಷಣದಲ್ಲಿ ಪ್ರಮಾಣ ಶಾಸ್ತ್ರವನ್ನು ಮಾಡಿಕೊಳ್ಳಬಲ್ಲ ಬುದ್ಧಿಯ ಚತುರ. 'ಹಮ್ಮು' ವಯಸ್ಸಿನಿಂದ ಹಿರಿಯ; ಅನೇಕರೊಡನೆ ಬೆರೆತುಕೊಳ್ಳುವ ಸ್ವಭಾವಕ್ಕಾಗಿ 'ಹನುಮಂತನು' 'ಹಮ್ಮು' ಆಗಿದ್ದ; ಪರೀಕ್ಷೆ ಪಾಸಾಗುವ ಅವಸರವಿದ್ದಿರಲಿಲ್ಲ 'ಹಮ್ಮು'ನಿಗೆ;

ಮಾತಿಗೆ ಮಾತು ಬೆರೆಸುವ ಮೋಜುಗಾರನಾಗಿದ್ದ. ಶ್ರೀಧರನಿಗೆ ಹರಟೆ ಬೇಡ, 'ಪರಟೆ' ಬೇಕು; ಪರರ ಹರಟೆಯನ್ನು ಸದಾ ಕೇಳುವುದಕ್ಕೆ 'ಪರಟೆ' ಎಂದು ಹಮ್ಯ್ಯಾನು ಕೊಟ್ಟ ಹೆಸರು. ಅಂತೂ ಈ ನಾಲ್ವರ ಜೋಡು ಒಂದು ಸಾಮರಸ್ಯವಾದಂತಿದ್ದಿತು. ಲೋಕಮಾನ್ಯರ ಭೌತಿಕ ದೇಹದ ಹಿಂದಿನಿಂದ ನಡೆದಾಗ ನಾಲ್ವರಿಗೂ ಅದೇ ವಿಷಯ; (ಶ್ರೀಧರನೊಬ್ಬನನ್ನು ಬಿಟ್ಟು) ಉಳಿದ ಮುವ್ವರಿಗೆ ಅದೇ ಹರಟೆ. ಹಮ್ಯ್ಯಾನ ಮಾತಿನ ಸುರಿಮಳೆಯಲ್ಲಿ ಬರಿ ತಲೆಯಮೇಲೆ ಸುರಿಯುತ್ತಿರುವ ಮುಂಬಯಿಯ ಧಬಧಬೆ ಮಳೆಯ ಪರಿವೆಯೆ ಈ ಗೆಳೆಯರಿಗಿರಲಿಲ್ಲ.

'ಅಂತೂ ಒಂದು ದೊಡ್ಡ ಜಾಗಾ ಖಾಲಿ ಆಯ್ತು' ಎಂದು ಹಮ್ಯ್ಯಾನು ತನ್ನ ಮಾತನ್ನು ನಿಲ್ಲಿಸಿದನು.

ಮಾಧವನ ವಿಚಾರವೇನಿದ್ದಿತೊ ? 'ದೇಶದ ಇಂಥಾ ಮಹತ್ವದ ಸಂದರ್ಭದೊಳಗ ಹೀಂಗ ಆಗಬಾರದಾಗಿತ್ತು' ಎಂದ. ಯಾರಿಂದಲೂ ಉತ್ತರ ಬಾರದ್ದಕ್ಕೋ ಏನೋ–'ವಯಸ್ಸೂ ಬಹಳ ಆಗಿದ್ದಿಲ್ಲ' ಎಂದು ಜೋಡಿಸಿದ.

'ರಾಜಕಾರಣದೊಳಗ ಬಿದ್ದಿದ್ದಿಲ್ಲ ಅಂದ್ರೆ ಟಿಳಕರ ಆಯುಷ್ಯ ಇಷ್ಟು ಬೇಗ ಮುಗಿಯುತ್ತಿದ್ದಿಲ್ಲ' ಎಂದು ಅನಂತ ತನ್ನ ಅಭಿಪ್ರಾಯವನ್ನು ಕೊಟ್ಟ.

ಮೆರವಣಿಗೆಯ ಗಲಾಟೆಯಲ್ಲಿ ಒಂದು ಗುಂಪು ಹಮ್ಯ್ಯಾನನ್ನು ಮುಂದೆ ನೂಕಿತು. ಅದಕಾಗಿ ಕನಲಿದನೇನೊ ಹಮ್ಯ್ಯಾ. ಯಾಕೆಂದರೆ ಅನಂತನ ಮಾತಿಗೆ ಒಳ್ಳೇ ಬಿರುಸಾದ ದನಿಯಲ್ಲಿ ಮಾರುತ್ತರವನ್ನು ಬೀಸಿದ 'ದಾದಾ ಭಾಯಿ ನವರೋಜಿ ತನಗೇ ಎಣಿಕೆ ತಪ್ಪುವಷ್ಟು ದಿನ ಜೀವಂತ ಇದ್ದ. ರಾಜ ಕಾರಣ ಅಂತ! ಸಾಯೋದಕ್ಕ ಯಾವ ಕಾರಣಾನೂ ಬೇಡ.'

ಮಾಧವ ಸುಮ್ಮನಿದ್ದ.

ಶ್ರೀಧರ ಲಕ್ಷ್ಯವಿಲ್ಲದ ಕಳೆಯಿಂದ ತನ್ನದೇ ವಿಚಾರವನ್ನು ಧೇನಿಸುವವ ನಂತೆ ನಡೆದಿದ್ದ.

ಅನಂತನಿಗೆ ಮಾತ್ರ ಸಮಾಧಾನವಾಗಲಿಲ್ಲ. ಹಮ್ಯ್ಯಾನ ಮಾತಿನಿಂದ ಅವನೊಳಗೆ ಹುದುಗಿದ್ದ ವಿಚಾರವನ್ನು ಕೆರಳಿದಂತಾಯ್ತು. 'ಯಾರು

ಏನೇ ಹೇಳಿದರೂ ಟಿಳಕರು ರಾಜಕಾರಣದೊಳಗ ಸೇರಿದ್ದು ದೇಶದ ದುರ್ದೈವ. ಅವರ ಪಾಂಡಿತ್ಯದಿಂದ ಹಿಂದುಸ್ತಾನದ ಹೆಸರು ಜಗತ್ತಿನಲ್ಲಿ ಮುಂದೆ ಬರಬಹುದಾಗಿತ್ತು' ಎಂದ.

'ಅದು ನಿನ್ನ ವಿಚಾರ. ಟಿಳಕರಿಗೂ ನಿನಗೂ ಭಿನ್ನಾಭಿಪ್ರಾಯ ಇದ್ಧಾಂಗ ಕಾಣ್ತದ. ಹಿಂದುಸ್ತಾನದ ಹೆಸರು ಮುಂದೆ ಬರ್ಬೇಕು ಅಂತ ನೀನು; ತನ್ನ ಹೆಸರು ಮುಂದೆ ಬರಬೇಕು ಅಂತ ಅವರು' ಎಂದ ಹಮ್ಯಾ. ಈಗ ಮಾಧವ ಮುಂದಾದ; ಅನಂತನು ಸಿಟ್ಟಿಗೆದ್ದು ಉತ್ತರ ಕೊಡಬಹುದಲ್ಲ ಎಂದು ಅವಸರದಿಂದಲೂ ತಾನೇ ಮೊದಲು ಮಾತನಾಡಿದ.

'ಅನಂತ ಅಂದದ್ದು ನಿಜ. ಟಿಳಕರು ರಾಜಕಾರಣ ಸೇರಿದ್ದೂ ಯೋಗ್ಯ'

'ನಿನ್ನ ಸರ್ಟಿಫಿಕೇಟ ದೊರಕಿಸಲಿಕ್ಕೇ ಸತ್ತರೇನೊ ಅನ್ನೋಹಾಂಗ ಮಾತಾಡ್ತಿಯಲ್ಲೊ ?'

ಮಾಧವನು ಹಮ್ಯಾನ ಹಗುರ ನಾಲಗೆಯನ್ನು ಲಕ್ಷ್ಯಕ್ಕೆ ತಾರದೆ ಮಾತನ್ನು ಮುಂದರಿಸಿದ.

'ಟಿಳಕರಂಥಾ ಪಾಂಡಿತ್ಯ ಸರ್ವಸಾಮಾನ್ಯವಾದುದಲ್ಲ. ಅಷ್ಟೊಂದು ಚುರುಕು ಬುದ್ಧಿಯುಂತೇ ದೇಶದ ದುಃಸ್ಥಿತೀನೂ ಅವರಿಗೆ ತಡೆಯಲಿಲ್ಲ. ನಮ್ಮ ದೇಶದ ದುರ್ದೈವ....ಅಥವಾ ಪರತಂತ್ರರಿಗೆ ಇದು ಬಿಡದ ಪ್ರಾಯಶ್ಚಿತ್ತ, ಬುದ್ಧಿವಂತರ ಬುದ್ಧಿಯ ಉಪಯೋಗವೆಲ್ಲಾ ವಿರೋಧದ ರಾಜಕಾರಣದೊಳಗೇ ಹಾಳಾಗೋದು.'

'ಚೌಪಾಟಿಗೆ ಬಂದು ಮುಟ್ಟಿಧಾಂಗ ಕಾಣ್ತದ ಮೆರವಣಿಗೆ. ನನ್ನ ಹೆಗಲಮ್ಯಾಲೆ ನಿಂತು ಲೆಕ್ಚರ ಕೊಡು, ಮಾಧೂ' ಎಂದು ನಗೆಯಾಡಿದ ಹಮ್ಯಾ.

ಶ್ರೀಧರ ನಿಂತುಕೊಂಡು ಚಂದನ ಕಟ್ಟಿಗೆಯ ರಾಶಿಯಿದ್ದ ಕಡೆ ದಿಟ್ಟಿಸುತ್ತ ನಿಂತ....ಲಕ್ಷಾವಧಿಯ ಆ ಜನಸಂಮರ್ದವು ಒಮ್ಮೆಲೆ ಹೆದರಿಕೆ ಹುಟ್ಟಿಸುವಂತೆ ಸ್ತಬ್ಧವಾಯಿತು.

೨

ಮಾಧವನು ಆ ತಿಂಗಳನ್ನೆಲ್ಲ ಮನಸ್ಸಿನ ಚಂಚಲತೆಯಲ್ಲಿಯೆ ಕಳೆದನು. ವರ್ಗದಲ್ಲಿ ಅಭ್ಯಾಸದ ಕಡೆ ಲಕ್ಷ್ಯವಿಲ್ಲ, ಹೊರಗೆ ಹಮ್ಯಾನ ವಿನೋದ

ದಿಂದಲೂ ತಣಿವಿಲ್ಲ. ಈ ಮನಃಸ್ಥಿತಿಯಲ್ಲಿ ತಂದೆಯಿಂದ ಬರುವ ಕಾಗದಗಳೂ ಮಾಧವನನ್ನು ಮತ್ತಷ್ಟು ಉದ್ವಿಗ್ನಗೊಳಿಸಿದವು. “ನಿನಗೆ ಶಿಷ್ಯವೃತ್ತಿ ದೊರೆತದ್ದು ನಮಗೆಲ್ಲರಿಗೂ ಆನಂದ; ಬೇಗ ಬಿ. ಎ. ಆಗಿ, ಪರೀಕ್ಷೆಯಲ್ಲಿ ಮೇಲೆ ಬಂದು, ದೊಡ್ಡ ಹುದ್ದೆ ದೊರಕಿಸಿ ನಮಗೆಲ್ಲರಿಗೆ ಆಧಾರನಾಗುವ ದಿವಸದ ದಾರಿಯನ್ನೆ ನೋಡುತ್ತಿದ್ದೇನೆ. ನಿನ್ನ ಪಾಂಡಿತ್ಯದ ಏರಾಟ ಕಣ್ಣಾರೆ ನೋಡಲು ನಿನ್ನ ತಾಯಿ ಇಲ್ಲದ್ದು ನಮ್ಮೆಲ್ಲರ ದುರ್ದೈವ.” ಯಾವುದೊ ಕಳವಳದಿಂದ ಅಸ್ಪಷ್ಟಗೊಂಡ ಮನಸ್ಸಿನ ಮಾಧವನಿಗೆ ತಂದೆಯ ಈ ಮಾತುಗಳ ಅರ್ಥವೆ ಬೇರೆಯಾಯಿತು. “ಕಲಿಯುವುದನ್ನು ಬೇಗ ಮುಗಿಸು; ತಾಯಿ ಇಲ್ಲದ್ದರಿಂದ ಹೆಂಡತಿಯನ್ನು ಮಾಡಿಕೊ; ಕೆಲಸ ಮಾಡಿ ನಮ್ಮೆಲ್ಲರ ಹೊಟ್ಟೆ ತುಂಬಿಸು.” ತಂದೆಯ ಈ ಅಭಿಪ್ರಾಯವು ಎಂತಹ ನಿಷ್ಕರುಣವಾದುದು— ಎಂದು ತಂದೆಯ ಮೇಲೂ, ಹಾಗೆ ಅರ್ಥ ಮಾಡಿಕೊಂಡ ತನ್ನ ಬುದ್ಧಿಮತ್ತೆಯ ಮೇಲೂ ಸಿಟ್ಟಾಗುತ್ತಿದ್ದನು. ಹೊಟ್ಟೆ ತುಂಬಿಕೊಳ್ಳಲು ಕೆಲಸ ಮಾಡುವುದಾದರೆ ಬುದ್ಧಿಮತ್ತೆಯ ಪ್ರದರ್ಶನವನ್ನು ಮಾಡುವುದೇಕೆ–ಎಂದು ತನ್ನ ಅಭ್ಯಾಸದ ಸ್ವಭಾವವನ್ನು ತಿರಸ್ಕರಿಸುತ್ತಿದ್ದನು. ಯಾವ ಕೆಲಸ ಮಾಡುವುದಾದರೂ ಬಿ. ಎ. ಆಗಬೇಕಂತೆ! ಎಲ್ಲ ಜಾತಿಯವರಿಗೆ ಹೊಟ್ಟೆ ತುಂಬುವ ದೇವನು ಒಬ್ಬನೇ ಆಗಿರದಿದ್ದರೂ, ಹೊಟ್ಟೆ ತುಂಬುವ ಪರೀಕ್ಷೆ ಒಂದೇ! ಅಥವಾ, ಬಿ. ಎ. ಎಂಬರೆಯೆ ಇಂದಿನ ಭಗವಂತನೊ!

ಮಾಧವನಿಗೂ ಅನಂತನಿಗೂ ದಿನದಿನಕ್ಕೆ ಈ ವಿಷಯ ಚರ್ಚೆ ಹೆಚ್ಚಾಗಿ ನಡೆಯಿತು. ಶ್ರೀಧರನು ಎಂದಿನಂತೆ ಪ್ರೇಕ್ಷಕನಾಗಿರುತ್ತಿದ್ದ. ಹಮ್ಮೂನಂತೂ ಇವರ ಚರ್ಚೆಗೆ ಬೇಸತ್ತು ವೃತ್ತಪತ್ರಗಳನ್ನೋದುವುದು, ಕಲ್ಪನೆಯಿಂದ ಅವುಗಳಲ್ಲಿಯ ಸುದ್ದಿಗಳನ್ನು ಬೆಳೆಯಿಸಿ ಬೇಕಾದವರೊಡನೆ ಹರಟೆ ಕೊಚ್ಚುವುದು—ಇದರಲ್ಲಿಯೆ ಆಸಕ್ತನಾದನು. ಪಠ್ಯಪುಸ್ತಕಗಳಿಗೂ ಹಮ್ಮೂನಿಗೂ ಎಂದಿಗೂ ಹೊಂದಿಕೆಯಾಗುತ್ತಿರಲಿಲ್ಲ; ಅನಂತ-ಮಾಧವರ ಚರ್ಚೆ ತಲೆನೋವನ್ನುಂಟುಮಾಡುವಂತಹದು. ಹೀಗಾಗಿ ಅನಿವಾರ್ಯವಾಗಿ, ಮುಂದೆ ಹೆಚ್ಚೆಚ್ಚಾಗಿ ವೃತ್ತಪತ್ರಿಕೆಗಳೊಡನೆಯೆ ಅವನು ಕಾಲಕಳೆಯತೊಡಗಿದನು. ಸುದ್ದಿಗಳಲ್ಲಿ ಅವನ ಆಸಕ್ತಿಯೂ ಬೆಳೆಯಿತು. ಯಾವಾಗಲೂ ಹರಟೆ ಕೊಚ್ಚುವ ಸ್ವಭಾವ; ಈಗ ಈ ಸುದ್ದಿಗಳ ನೆವದಿಂದ ಹರಟೆಯನ್ನು

ಪ್ರಾರಂಭಿಸುವ. ಅನಂತ-ಮಾಧವರ ಚರ್ಚೆ ನಡೆದಾಗ ತನ್ನ ಸುದ್ದಿಗಳ ನೆವದಿಂದ ಮತ್ತೆ ತನ್ನ ಹಳೆಯ ರೀತಿಯನ್ನು ಪ್ರಸ್ತಾವಿಸತೊಡಗಿದ. ಒಂದು ದಿನ, ಕಲಿತು ಮಾಡುವುದೇನು ಎಂದು ಇಬ್ಬರೂ ಗೆಳೆಯರು ಚರ್ಚಿಸುತ್ತಿರುವಾಗ ಹಮ್ಮೂಮನು ನಡುವೆ ಬಾಯಿ ಹಾಕಿ "ಅನಂತಾ, ನೀನು ಇಂಗ್ಲಂಡಕೆ ಹೋಗುವಾಗ ಹಾದಿಯೊಳಗ ತುರ್ಕಸ್ತಾನಕೆ ಹೋಗು" ಎಂದ. ಹಮ್ಮೂಮನ ಮಾತಿನಿಂದ ಗೆಳೆಯರ ನಡುವೆ ಸಿಡಿಲು ಬಿದ್ದಂತಾಯಿತು. ಒಂದರೆ ನಿಮಿಷ ಮಾಧವನೂ ಶ್ರೀಧರನೂ ಅನಂತನ ಮುಖವನ್ನು ದಿಟ್ಟಿಸುತ್ತ ಬಾಯ್ದೆರೆದು ಕುಳಿತರು. ಅನಂತನೂ ಅವರನ್ನು ಬಿಟ್ಟು ಮಿಕ್ಕ ಎಲ್ಲ ಕಡೆ ದೃಷ್ಟಿಯನ್ನು ಹೊರಳಿಸ ಯತ್ನಿಸಿದನು. ಹಮ್ಮೂಮನು ಹಲ್ಲು ಕಿರಿದನು.

"ಅನಂತ ಇಂಗ್ಲಂಡಿಗೆ ಹೋಗತಾನೆ?" ಮಾಧವನಿಗೆ ನಂಬಲಾರದಂತಹ ಆಶ್ಚರ್ಯ.

"ನಿಮ್ಮಂಥಾ scholar ರ ಹಣೆಬರಹನೆ ಇದು! ನನ್ನಹಾಂಗ ನ್ಯೂಜ್ ಪೇಪರ ತಪ್ಪದೆ ಓದುತ್ತಿದ್ದರೆ ನಿಮಗೆ ಎಂದೋ ಗೊತ್ತಾಗತಿತ್ತು ಅನಂತ ಇಂಗ್ಲಂಡಕೆ ಹೋಗತಾನೆ ಅನ್ನೋದು"

ಈ ಮಹತ್ವದ ಸಂಗತಿಯನ್ನು ಇದುವರೆಗೆ ಮಾಧವ-ಶ್ರೀಧರರಿಗೆ ಹೇಳದೆ ಬಿಟ್ಟುದಕ್ಕೆ ನಾಚಿದವನಂತೆ ಅನಂತ "ಆಯ್. ಸಿ. ಎಸ್. ಕೆ ಹೋಗ್ಬೇಕೂ ಅಂತ ನನ್ನ ತಂದೆಯವರು ಆಗ್ರಹ ಮಾಡಿದರು" ಅಂದ.

"ಅಭ್ಯಾಸ ಮಾಡಿ ಪರೀಕ್ಷಾ ಪಾಸಾದರೆ ಇಂಥಾವೆಲ್ಲಾ ತ್ರಾಸ ಬರತಾವಂತ ನನಗ ಮೊದಲಿನಿಂದಲೂ ಗೊತ್ತು. ಅದಕೇನಾ ಬೇಕಂತೇ ಪಾಸಾಗೋದನ್ನೆ ಬಿಟ್ಟೆ."

ಹಮ್ಮೂಮನ ಮಾತಿಗಾಗಿ ನಕ್ಕು ಮತ್ತೆ ಎಲ್ಲರೂ ಸಲುಗೆಯ ವಾತಾವರಣವನ್ನೆ ನಿರ್ಮಿಸಿಕೊಂಡರು.

"ಅಪ್ಪನ ಆಸ್ತಿ ಸಾಕಷ್ಟು ಅದ."

ಯಾರಿಗೂ ದನಿಯ ಗುರುತು ಹತ್ತದವರಂತೆ ಎಲ್ಲರೂ ಮಾತಾಡಿದವನನ್ನು ಆಶ್ಚರ್ಯದಿಂದ ನೋಡಿದರು. ಈ ವಾಕ್ಯ ಶ್ರೀಧರನದು. ತನ್ನ ದನಿಯ ಗುರುತು ತನಗೂ ಹತ್ತಿಲ್ಲ ಎಂಬಂತಹ ಕಳೆ ಅವನ ಮುಖದ ಮೇಲಿದ್ದಿತು.

'ಆಸ್ತಿ ಅಪ್ಪನದಿದ್ದರೂ I.C.S ಕೆ ಅಪ್ಪ ಕೂಡೋದಿಲ್ಲಲ್ಲ' ಎಂಬ

ಹಮ್ಮ್ಯಾನ ಮಾತಿನಿಂದಲೆ ವಾತಾವರಣ ಮತ್ತೆ ಉಸಿರಾಡಿಸಲು ಯೋಗ್ಯವಾದಂತಾಯಿತು.

'I. C. S. ಕ ಹೋಗ್ಬೇಕೂಂತ ಅಪ್ಪನದೇ ಜುಲುಮೆ. ನಾನೂ ಮಾಧವನ ಹಾಂಗ Scholar ಆಗಿದ್ದರೆ ಅನುಮಾನ ಮಾಡತಿದ್ದಿಲ್ಲ.'

'I. C. S. ಕ ಕೂಡು, ಬೇಕಾದ್ರ ಬಿಡು. ಆದರೆ ತುರ್ಕಸ್ತಾನ ನೋಡಿಕೊಂಡು ಬರಲಿಕ್ಕೆ ಮರೆಯಬೇಡ.'

'ಯಾಕೊ, ಹಮ್ಮ್ಯಾ? ತುರ್ಕಸ್ತಾನದ ಮ್ಯಾಲೆ ಯಾಕೆ ನಿನ್ನ ದೃಷ್ಟಿ ಹಾಯ್ದದೆ?'

'ನನ್ನ ದೃಷ್ಟಿ ಅಲ್ಲ, ಅನಂತಾ; ನಮ್ಮ ದೇಶದ್ದೇ ದೃಷ್ಟಿ ಹಾಯ್ದಾಂಗ ಕಾಣ್ತದ. ನ್ಯೂಜಪೇಪರ ಓದ್ತೀನೇನೊ ಅಹುದು. ಆದರೆ ಈ ಖಿಲಾಫತ್‌ದ ಬೊಬ್ಬಾಟದ ಅರ್ಥವೇ ಆಗವಲ್ಲದು.'

'ಮುಸಲ್ಮಾನರು ಎಂದಾದರೂ ಧರ್ಮಾಂಧರು' ಎಂದ ಮಾಧವ.

'ಬರಿಯ ಮುಸಲ್ಮಾನರೆ ಇಲ್ಲ ನಮ್ಮವರೂ ಸೇರಿಕೊಂಡಾರ. ನೀ ಕೇಳಿದೆಯೊ ಇಲ್ಲೊ; ಮೋಹನದಾಸ ಕರಮುಚಂದ ಗಾಂಧಿ ಅಂತ. ಬರಿಗಾಲಿನಿಂದ ತಿರುಗಾಡೋ ಹಟ ಅದ ಆಂತ ನೋಡು ಅವನಿಗೆ. ಅವನೂ ಮುಸಲ್ಮಾನರೂ ಕೂಡಿಕೊಂಡೇ ಏನೋ ನಡೆಸಿಧಾಂಗ ಕಾಣ್ತದ. ನನಗ ಓದಿದ್ದೆಲ್ಲಾ ತಿಳಿಯೋದಿಲ್ಲ ಅಂತ ಹೇಳಿದೆನಲ್ಲ [ಮತ್ತೆ ತಿಳೀತಿದ್ದರೆ ಪರೀಕ್ಷಾನೆ ಪಾಸಾಗ್ತಿದ್ದೆ, ಪೇಪರ್ ಯಾಕ ಓದುತಿದ್ದೆ ಅನ್ನು] ಆದರೂ ಏನೊ ನಡೆದಿದೆ ದೇಶದೊಳಗ' ಎಂದ ಹಮ್ಮ್ಯಾ.

ಶ್ರೀಧರನಿಗೆ ಬೇಜಾರಾಯಿತೊ, ಪಾಠಾಗಲು ನೆವ ಬೇಕಾಗಿತ್ತೊ, ಅಂತೂ ಹರಟೆಯ ಚಾವಡಿಯಿಂದ ಎದ್ದನು.

'ಹಮ್ಮ್ಯಾಗ Politics ಸೇರೋ ಹಾಂಗ ಕಾಣ್ತದ' ಎಂದು ಅನಂತ ನಗೆಯಾಡಿದ.

'ಇಂಗ್ಲಂಡದೊಳಗ ಹುಟ್ಟಿದ್ದರೆ ನಿಮ್ಮ ಗವರ್ನರ ಆಗಿ ಬರ್ತಿದ್ದೆ; ಅಂದ್ರೆ ನೀವು ಬಿ. ಎ. ಆದರೆ ನಿಮ್ಮ ಡಿಗ್ರಿ ನಾನು ಕೊಡತಿದ್ದೆ ಚಾನ್ಸಲರ ಆಗಿ' ಎಂದ ಹಮ್ಮ್ಯಾ.

ಅಂತೂ ಗೆಳೆಯರು ನಗೆಯಲ್ಲಿಯೆ ಅಂದಿನ ಚಾವಡಿಯನ್ನು ಮುಗಿಸಿದರು.

೩

ಆ ರಾತ್ರಿ ಮಾಧವನಿಗೆ ನಿದ್ರೆ ಬರಲಿಲ್ಲ. ಶ್ರೀಧರನ ಮಾತು ಅವನ ತಲೆಯನ್ನು ಯಾವುದೊ ರೀತಿಯಲ್ಲಿ ಕೆಣಕಿತು. ಶ್ರೀಧರನು ಆಡಿದ ಮಾತಿಗಾಗಿ ಅವನಿಗೆ ಆಶ್ಚರ್ಯವಾಗಿತ್ತು; ಶ್ರೀಧರನು ಕಡಿಮೆ ಮಾತಿನವನೆಂಬುದಾಗಿ ಆದರವಿದ್ದಿತು. "ಅಪ್ಪನ ಆಸ್ತಿ ಸಾಕಷ್ಟು" ಎಂದು ಶ್ರೀಧರ ನುಡಿದದೇಕೆ? ಯಾಕೆಂದರೆ ಆ ದೃಷ್ಟಿಯಿಂದ ಅನಂತನಿಗಿಂತ ಶ್ರೀಧರನೆ ಭಾಗ್ಯವಂತನಾಗಿದ್ದನು; ಹಮ್ಮೂರನ ಆಸ್ತಿಯೂ ಸಾಕಷ್ಟು ದೊಡ್ಡದಿತ್ತು. ತನ್ನ ಊರಿಗೆ ದೊಡ್ಡ ಜಮೀನುದಾರನಾಗಿದ್ದನು ಶ್ರೀಧರನ ತಂದೆ; ಹಮ್ಮೂರನಂತೂ ತಾನು 'Golden Gowda' ಎಂದು ಹೇಳಿಕೊಳ್ಳುತ್ತಿದ್ದನು. ಶ್ರೀಧರನು ತಂದೆಗೆ ಒಬ್ಬನೇ ಮಗ. ತಾನು ಇಂಗ್ಲೆಂಡಿಗೆ ಹೋಗಬೇಕೆಂದರೆ ಯಾರೂ ಬೇಡ ಎನ್ನಲಿಕ್ಕಿಲ್ಲ. ಹೀಗಿದ್ದೂ ಅನಂತನಿಗಾಗಿ ಅಸಹ್ಯವೇಕೆ? ಅದೊಂದೆ ವಾಕ್ಯವನ್ನು ನುಡಿವಾಗ ಶ್ರೀಧರನು ತನ್ನನ್ನು ನೋಡಿದ ದೃಷ್ಟಿಯೂ ಮಾಧವನ ಸ್ಮರಣೆಗೆ ಬಂದಿತು....ಎಂದರೆ— ?....ಇರಬಹುದೆ?—ತನಗಾಗಿ—ಎಂದರೆ ಮಾಧವನಿಗಾಗಿ ಶ್ರೀಧರನು ಅನಂತನನ್ನು ಮೂದಲಿಸಿರಬಹುದೆ?.... ಮಾಧವನಿಗೆ ಸೋಜಿಗವೆನಿಸಿತು.... ಶ್ರೀಧರನ ಸ್ವಭಾವವೇನೊ ವಿಚಿತ್ರವಿದ್ದಿತು. ಕೈಗೊಂದು ಕಾಲಿಗೊಂದು ಆಳನ್ನು ದುಡಿಸಿಕೊಳ್ಳುವ ಯೋಗ್ಯತೆ ಇದ್ದರೂ ಶ್ರೀಧರನು ಮುಂದಿಯ ಕೆಲಸಕ್ಕಾಗಿ ಯಾವಾಗಲೂ ಮುಂದಾಗುವ ಸ್ವಭಾವದವನು. ವಿಶೇಷವಾಗಿ ಮಾಧವನ ಬಗ್ಗೆ ಅವನಿಗೆ ಮೆಚ್ಚು; ಮಾಧವನ ಬುದ್ಧಿವಂತಿಕೆಯ ಬಗ್ಗೆ ಆದರ, ಹೆಮ್ಮೆ....ಓಹೊ!....ಹೀಗಿರಬಹುದೆ? ....ಬುದ್ಧಿವಂತಿಕೆಯನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಹೆಚ್ಚಿನ ಶಿಕ್ಷಣದ ಯೋಗ್ಯತೆ ತನಗೆ—ಮಾಧವನಿಗೆ—ಇದೆ; ಅನಂತನಿಗಿಲ್ಲ; ಅನಂತ ಪರದೇಶಕ್ಕೆ ಹೋಗುವುದು ಕೇವಲ "ಅಪ್ಪನ ಆಸ್ತಿಯ" ಧೈರ್ಯದಿಂದ!

ಆದರೂ ಎಂತಹ ಹುಚ್ಚು ವಿಚಾರ, ಎನಿಸಿತು ಮಾಧವನಿಗೆ. ತಾನು ಇಂಗ್ಲಂಡಕ್ಕೆ ಹೋಗಬಹುದೆ? ಶಿಷ್ಯವೃತ್ತಿ ದೊರೆಯದಿದ್ದರೆ ಇಲ್ಲಿಯ

ಶಿಕ್ಷಣ ಕೂಡ ಅಶಕ್ಯ. ಇದಲ್ಲದೆ 'ಮನೆಯ ಅನುಕೂಲತೆ'ಗಾಗಿ ಇಷ್ಟರಲ್ಲಿಯೆ ತಂದೆ ತನ್ನ ಮದುವೆಯನ್ನೂ ಮಾಡಬಹುದು. ತನಗೆ ತಪ್ಪೆನ್ನಿಸಿದರೂ ಒಲ್ಲೆ ಎನ್ನುವ ಧೈರ್ಯವಿಲ್ಲ ಎಂದು ಮಾಧವನು ಬಲ್ಲ. ಮದುವೆಯಾದ ಮೇಲೆ ಅವಶ್ಯವೆನಿಸಿದರೆ (ಅದೇ ಸಂಭವ ಹೆಚ್ಚು) ಕಲಿಯುವುದನ್ನು ನಿಲ್ಲಿಸಿ ನೋಕರಿ ಹುಡುಕಬೇಕು....ಇದನ್ನರಿತೂ ನಾನೀಗ ಕಲಿಯುವುದೆಂದರೆ ಶುದ್ಧ ತಿಳಿಗೇಡಿತನ— ಎಂದುಕೊಂಡ ಮಾಧವ.

ನಿದ್ರೆ ಬಾರದು.... ಕಲಿಯುವುದು ತಪ್ಪು.... ಕಲಿಯುವುದಾದರೆ ದುಡ್ಡು ಬೇಕು.... ದುಡ್ಡಿಗಾಗಿ ಕಲಿಯುವವರು— ....ತುರ್ಕಸ್ತಾನದಲ್ಲಿ ಏನಿದೆ?.... ಖಿಲಾಫತ್ ಅಂದರೇನೊ? .... ಮೊನ್ನೆ ಪೇಪರಿನಲ್ಲಿ ಬಂದಿತು.... ಹಮ್ಮೂನು ಕೂಡ ಪೇಪರ ಓದುತ್ತಾನಲ್ಲ? .... ಬನಾರಸದಲ್ಲಿ ಖಿಲಾಫತ್! .... ಅಹುದು .... ಜೂನ್ ತಿಂಗಳಲ್ಲಿ ಬನಾರಸದಲ್ಲಿ ಯಾವುದೊ ಸಭೆಯಾಗಿತ್ತಂತಲ್ಲ?.... ಪೇಪರಿನಲ್ಲಿ ಓದಿದ್ದು ನನಗೆ ತಿಳಿಯುತ್ತದೆ .... ನಾಳಿನಿಂದ ಹಮ್ಮೂನನ್ನು ಹೆಚ್ಚಾಗಿ ಮಾತಾಡಿಸಬೇಕು .... ಕಲಿಯುವುದಾಗದಿದ್ದರೆ ನಾನೂ ಹೆಚ್ಚಾಗಿ ಪೇಪರ್ ಓದಬಹುದಲ್ಲ?

ಮಾಧವನು ಮಗ್ಗುಲನ್ನು ಬದಲಾಯಿಸಿ ಮಲಗಿದ .... ನಿದ್ರೆ ಬಾರದು.... ಆದರೆ ವಿಚಾರಗಳಿಗಾಗಿ ಶಬ್ದವೂ ಬಾರದಂತಾಯಿತು.... ಕ್ರಮೇಣ ಅವನ ಕಣ್ಮುಂದೆ ಚಿತ್ರಗಳು ಸುಳಿಯತೊಡಗಿದುವು.... ಟಿಳಕರ ಸ್ಮಶಾನ ಯಾತ್ರೆ — ಬನಾರಸ್ — ಖಿಲಾಫತ್ ಸಭೆ — ಗಾಂಧಿ— ಅಸಹಕಾರ — ಗಾಂಧಿಗೆ ಉದ್ದವಾದ ಗಡ್ಡವಿದೆ — ಬರಿಗಾಲು — ಓಂದೆ ಮುಸಲ್ಮಾನರು — ಗಾಂಧಿ ನಡೆದಿದ್ದಾನೆ — ಗಾಂಧಿಯ ಹೆಗಲ ಮೇಲೆ ಟಿಳಕರ ಭೌತಿಕ ದೇಹ — ಮತ್ತೆ ಸ್ಮಶಾನಯಾತ್ರೆ — 'ಸಾಯೋದಕ್ಕ ಯಾವ ಕಾರಣಾನೂ ಬ್ಯಾಡ' —

— 'ಅಪ್ಪನ ಆಸ್ತಿ ಸಾಕಷ್ಟು ಅದ—'

ಮಾಧವನಿಗೆ ಗಾಢವಾದ ನಿದ್ರೆ.

. . . .

೪

ತಟ್ಟನೆ ಮಾಧವನು ಎಚ್ಚೆತ್ತನು. ಸುತ್ತಲೂ ಕಣ್ಣು ಹಿಳುಕಿಸಿದನು. ಕಣ್ಣೊರೆಸಿಕೊಂಡು ನೋಡಿದನು. ಕಿಡಿಕಿಯಲ್ಲಿ ಧ್ವಜಪಟವು ಗಾಳಿಗೆ ಪಟ

ಪಟ ಎನ್ನಲು ಪೂರ್ತಿಯಾಗಿ ಎಚ್ಚೆತ್ತನು. ಇಪ್ಪತ್ತೇಳು ವರುಷಗಳ ಹಿಂದಿನ ಅನುಭವದ ಹಗಲುಗನಸನ್ನು ಕಾಣುವಾಗ ತಾನು ನಿದ್ದೆ ಹೋದುದೆಂದು ತಿಳಿದು ಬಂದಿತು. ದೇಹದ ಮೇಲಾದರೂ ಎಷ್ಟು ಪರಿಣಾಮವಾಗಿದೆ ಈ ಅವಧಿಯಲ್ಲಿ? ಒಂದು ಅನುಭವದ ಬರಿಯ ಸ್ಮರಣೆಯಿಂದ ದೇಹಕ್ಕೆ ಆಯಾಸವಾಗುವುದು. ಆದರೂ ಒಂದಾನೊಂದು ಕಾಲದಲ್ಲಿ ಎಂತಹ ಗಟ್ಟಿಗ ತನವಿದ್ದಿತು ಈ ದೇಹದಲ್ಲಿ? ಅಂದು ತನ್ನ ಗೆಳೆಯರೊಡನೆ ಚರ್ಚೆ ಮಾಡು ವಾಗ ಎಂತಹ ಧೈರ್ಯದ ದಾರಿಯನ್ನು, ವೀರ ವ್ರತವನ್ನು ಕೈಕೊಂಡಿದ್ದ? ಹಮ್ಮೂನೊಡನೆ ಚರ್ಚಿಸುತ್ತ ತಾನೂ ವೃತ್ತಪತ್ರಗಳನ್ನು ಲಕ್ಷ್ಯಪೂರ್ವಕ ವಾಗಿ ಓದತೊಡಗಿದ. ಅಭ್ಯಾಸದ ಮೇಲಿನ ಮನಸ್ಸೇ ಹೋಗಿತ್ತು. ಯಾಕೆಂದರೆ, ಮುಂದೆ ೪-೫ ದಿನಗಳಲ್ಲಿಯೆ ತಂದೆಯಿಂದ ಪತ್ರ ಬಂದಿತ್ತು 'ಹುಡುಗೆಯನ್ನು ನೋಡಿರುವೆ, ಅನುಕೂಲ ನೋಡಿಕೊಂಡು ಕ್ಷಿಪ್ರದಲ್ಲಿಯೆ ನಿನ್ನ ಮದುವೆಯನ್ನೇ ಮಾಡುವುದು ಗೊತ್ತಾಗಿದೆ' ಎಂದು. ಆ ಕಾಗದವ ನ್ನೋದಿ ಮಾಧವನ ಮನಸ್ಸೇ ಮುರಿದಂತಾಗಿತ್ತು. ಮದುವೆ! ಮದುವೆ ಯನ್ನು ಕೂಡ 'ಅಪ್ಪನ ಆಸ್ತಿ ಸಾಕಷ್ಟು ಇದ್ದರೇನೇ ಮಾಡಿಕೊಳ್ಳಬೇಕು' ಎಂದ ಮಾಧವ ಶ್ರೀಧರನಿಗೆ. ಶ್ರೀಧರನು ಉತ್ತರ ಕೊಡಲಿಲ್ಲ. 'ಮದುವೆ ಅಂದ್ರೆ ಸ್ವಂತದ ಆಸ್ತಿ, ಯಾರಪ್ಪನದೂ ಅಲ್ಲ' ಎಂದ ಹಮ್ಮೂ. ಹಮ್ಮೂನ ಮದುವೆಯಾಗಿ ಎಷ್ಟೋ ದಿನಗಳಾಗಿದ್ದವು. ಆದರೆ ಹಮ್ಮೂನ ಸ್ವಭಾವ ವಿಚಿತ್ರವಾಗಿದ್ದಿತು ಈ ಬಗ್ಗೆ. 'Golden Gowdaಗೆ ಊರಿಗೊಂದು ಗೌಡಿತಿ' ಎಂತಿದ್ದ. ಅನಂತನೊಬ್ಬ ಮಾತ್ರ ಮದುವೆಯ ಬಗ್ಗೆ ಗಂಭೀರ ವಾಗಿ ಚರ್ಚೆ ಮಾಡಿದ.

'ಕಲಿಯೋತನಕ ಮದುವೆ ಆಗಬಾರದು' ಎಂದ ಅವ.

'ಯಾರು ಕಲಿಯೋತನಕ? ಹೆಂಡತಿಯೊ? ಗಂಡನೊ?' ಎಂದು ಹಮ್ಮೂನ ವಿತಂಡ ಪ್ರಶ್ನೆ.

'ಮದುವೆ ಅಂಬೋದು ನಮ್ಮಲ್ಲಿ social contract ಉ. ವ್ಯಕ್ತಿಗೆ ಅಭಿಪ್ರಾಯಸ್ವಾತಂತ್ರ್ಯ ಇಲ್ಲ' ಎಂದು ಮಾಧವನು ವಾದಿ ಸಿದನು.

'ಬಂದನಪ scholar!' ಎಂದ ಹಮ್ಮೂ. 'social contract

ಅಂತ! ಮದುವೆ ನಡೆಸೋ ಕಾಂಟ್ರ್ಯಾಕ್ಟ ಅಪ್ಪನದೂ ಅಂದ್ರೆ, ಸಂಸಾರ ಮಾಡೋ confact ಮಗನದು.'

ಅನಂತನಿಗೆ ಈ ತಮಾಷೆ ಸರಿಬರಲಿಲ್ಲ. 'ಹಮ್ಮೂ, ನೀ ಹ್ಯಾಂಗ ಸಂಸಾರ ಮಾಡ್ತೀ ಅನ್ನೋದು ಗೊತ್ತಿದೆ. ಆ ವಿದ್ಯಾ ಕಲಿಸಬ್ಯಾಡ ಮಾಧೂಗ.'

'ಕಲಿಸಿದೊಡೇಂ ಬರ್ಪುದೆ—ಅಂತ ಅಂಬಿಲ್ಲ ಯಾವ್ದೋ ಕನ್ನಡ ಪುಸ್ತಕದಾಗ ?'

'ನಿನಗ ಕನ್ನಡದ ಮ್ಯಾಲೆ ಬಹಳ ಲಕ್ಷ್ಯಕಾಣ್ತದ, ಹಮ್ಮೂ ?' ಎಂದ ಮಾಧವ.

'ಅದರ ಹೊರ್ತು ಎರಡನೇದ್ದು ಬರಬೇಕಲ್ಲ ?' ಎಂದು ಶ್ರೀಧರನು ನುಡಿಯಲು ಹಮ್ಮೂನು ಗಟ್ಟಿಯಾಗಿ ನಗುತ್ತ, 'ಮಾತು ಕಡಮೆ ಆಡುವ ವರಿಗೆ ಮರ್ಮ ತಿಳಿದಿರ್ತದ ನೋಡು' ಎಂದ.

ಅನಂತನನ್ನು ಹೆಚ್ಚಾಗಿ ಮಾತನಾಡಿಸಬೇಕೆಂದು ಮಾಧವನಿಗೆ ಆತುರ.

'ಒಂದು ದೃಷ್ಟಿಯಿಂದ ಕಲಿಯೋದಕು ಮದುವೆಗೂ ಸಂಬಂಧ ಇಲ್ಲ' ಎಂದ.

'ಸಂಬಂಧ ಯಾಕೆ ಇಲ್ಲ ? ಕಲಿಯೋ ಮುಂಚೆ ಮದುವೆ ಆಯ್ತು ಅಂತ ತಿಳಿ. ಕಲಿತ ಮ್ಯಾಲೆ ನಿನ್ನ ವಿಚಾರ ಬ್ಯಾರೆ ಆಗೋದು. ನಿನ್ನ ದೃಷ್ಟಿನೇ ಬದಲಾಗೋದು. ಆಗ ಮುಂಚೆ ಮಾಡಿಕೊಂಡ ಹೆಂಡತಿ ಮನ ಸೀಗೆ ಬರಲಿಲ್ಲ ಅಂತ ತಿಳಿ. ಇನ್ನೊಬ್ಬಾಕೆ ಮನಸೀಗ ಬಂದಳೂಂತ ತಿಳಿ—'

'ಆಕೀನ್ನೂ ಮಾಡಿಕೊಂಡ್ರಾತು. ಇದೇನು ಅಂಜುಬುರುಕ argument ಓ !' ಎಂದ ಹಮ್ಮೂನ ಮಾತಿಗೆ ಶ್ರೀಧರನೊಬ್ಬನೆ ನಕ್ಕನು. ಅನಂತ ಕೆರಳಿದ. 'Be serious, Hammu!' ಎಂದ.

'ನಾ ಸೀರಿಯಸ್ಸೇ ಇದ್ದೀನಿ. ಅಲ್ಲಸ, ಮದುವೆ ಆಗೋದು ಅಂತ ತಿಳಿ. ಕಲಿತೀನಿ ಅದಕ್ಕೆ ಒಲ್ಲೆ ಅಂದಿ ಅಂತ ತಿಳಿ, ಮುಂದ ಕಲಿತ ಮ್ಯಾಲೆ ನಿನ್ನ ದೃಷ್ಟಿ ಬದಲಾಯ್ತು ಅಂತ. ಆಗ ಮೊದಲು ಬ್ಯಾಡಾದ ಹುಡುಗೀನೇ ಬೇಕನಿಸಿತು ಅಂತ ತಿಳಿ. ಆಗೇನು ? ಆಕೆಯು ಮದುವೆ ಎಂದೋ ಆಗಿ

ಹೋಗೇದ. ತನಗ ಬಂದಾಗ ತನ್ನ ಹೆಂಡತೀನ್ನ ಮಾಡಿಕೊಳ್ಳೋದು ಬಿಟ್ಟು ಆಕೆ ಎರಡನೇದವರ ಹೆಂಡತಿ ಆದ ಮ್ಯಾಲೆ ಬೇಕು ಅನ್ನೋದು—'

ಅನಂತನೆ ಗಟ್ಟಿಯಾಗಿ ನಕ್ಕು 'Hopless ಇದ್ದೀ, Hammu' ಎಂದ.

ಮಾಧವನಿಗೆ ಈ ಚರ್ಚೆ ಬೇಡಾಗಿತ್ತು. ಬಡವನಾದ ತಾನು ಕಲಿತು ಮುಂದಾಗಬೇಕೆಂಬ ಆಶೆ ಇಟ್ಟುಕೊಂಡಾಗ ಮದುವೆ ಮಾಡಿಕೊಂಡು ಬಡ ತನದಲ್ಲಿಯೆ ನಿರಾಶೆ ಹೊಂದಬೇಕೆ—ಎಂಬ ಪ್ರಶ್ನೆ ಅವನದು. ಆದರೆ ಗೆಳೆಯರ ಮುಂದೆ ಕೇಳುವುದು ಹೇಗೆ? ಕೊನೆಗೆ ಯುಕ್ತಿಯಿಂದ ಮಾತನ್ನು ಮುಂದರಿಸಿದ. 'ಇಲ್ಲಿ ನೋಡು, ಅನಂತಾ. ಈಗ ನೀನು ಮದುವೆ ಮಾಡಿಕೊಳ್ಳದಿದ್ದರೆ ನಿನ್ನ ಇಂಗ್ಲಂಡಕ ಕಳಿಸೋದಿಲ್ಲ ಅಂದರು ನಿನ್ನ ತಂದೆ. ಆಗೇನು ಮಾಡುವೆ?' 'ಆಗ—' ಅನಂತ ವಿಚಾರಿಸುತ್ತಲೆ ನುಡಿದ— 'ಆಗ ಮದುವೆ ಮಾಡಿಕೊಳ್ಳುವೆ. ಇಂಗ್ಲಂಡಕ್ಕೆ ಹೋಗುವೆ. ಮುಂದಿನ ಮಾತು ನನ್ನ ಕೈಯಲ್ಲಿ.'

ಮಾಧವನ ಮಾತು ನಿಂತಿತು. ಮದುವೆಯ ಬಗ್ಗೆ ತಮಗೆ ಯಾರಿಗೂ ಯಾವ ವಿಚಾರವೂ ಇಲ್ಲ ಎಂಬುದು ಹೊಳೆಯಿತು. ತನ್ನ ಸಂದರ್ಭದಲ್ಲಿ ಮದುವೆ ತಪ್ಪದು ಎಂದು ಕಂಡನು. ಆದಷ್ಟು ಪ್ರಯತ್ನ ಮಾಡಿ ತಂದೆಯ 'ಕ್ಷಿಪ್ರ' ತನ್ನ 'ಕ್ಷಿಪ್ರ'ವಾಗದಂತೆ ನೋಡುವುದು ಎಂದುಕೊಂಡನು.

. . . .

ಆಗ ತಾನು ಗಟ್ಟಿ ಮನಸ್ಸು ಮಾಡಿದ್ದರೆ? ಇಪ್ಪತ್ತೇಳು ವರ್ಷಗಳ ನಂತರ ಬಂದ ಬುದ್ಧಿಯ ಉಪಯೋಗವೇನು? ಆಗ ಮನಸ್ಸು ಗಟ್ಟಿ ಇರಲಿಲ್ಲ, ದೇಹ ಗಟ್ಟಿ ಇದ್ದಿತು; ಈಗ—೧೯೪೭ರಲ್ಲಿ—ಮನಸ್ಸು ಗಟ್ಟಿಯಾಗಿದೆ, ದೇಹ ಮಾತ್ರ ಗಟ್ಟಿಯಾಗಿಲ್ಲ. ಮನಸ್ಸು ಗಟ್ಟಿಯಾಗಿದೆ ಎಂಬುದರಲ್ಲಿ ಸಂದೇಹವೆ ಇಲ್ಲ. ಮನಸ್ಸು ಗಟ್ಟಿ ಇಲ್ಲದಿದ್ದರೆ ಇಂದು ಈ ಮೆರವಣಿಗೆಯ ದಾರಿಯನ್ನು ಕಾಯುತ್ತಿದ್ದನೆ ತಾನು? ಸ್ವಾತಂತ್ರ್ಯದ ಮೆರವಣಿಗೆ! ಅದನ್ನು ಕೇಳಿದಾಕ್ಷಣ ಮನಸ್ಸು ಸಿಡಿದು ಹೋಗಬೇಕಿತ್ತು. ನಿಜವಿದ್ದ ಮಾತೆಂದರೆ, ಸ್ವಾತಂತ್ರ್ಯಕ್ಕಾಗಿ ಎಳ್ಳಷ್ಟೂ ಸಂತೋಷವಿಲ್ಲದಿದ್ದರೂ ಮನಸ್ಸನ್ನು ಗಟ್ಟಿಯಾಗಿ ಮಾಡಿ ಮೆರವಣಿಗೆ ನೋಡಲು ಕುಳಿತಿದ್ದಾನೆ—ತಾನು! ಎಂತಹ

ನಾಟಕೀಯ ಸಂನಿವೇಶ! ಇಪ್ಪತ್ತೇಳು ವರುಷಗಳ ಹಿಂದೆ ಇದೇ ಅಗಸ್ಟ ತಿಂಗಳಲ್ಲಿಯೆ ಒಂದು ಮಹತ್ವದ ಘಟನೆ ನಡೆದಿತ್ತು. ಅದರ ಪರಿಣಾಮ ವೇನೆಂದರೆ ಇಂದಿನ ತನ್ನ ಜೀವನ, ಈ ಮುಗ್ಗಲಗೇಡಿ ದೇಹ, ಈ ಗತಿಗೇಡಿ ತನ. ಮಾಧವನಿಗೆ ಇನ್ನೂ ಸ್ಮರಣೆಯಲ್ಲಿದೆ. ಅದನ್ನು ನೆನೆದಾಗೊಮ್ಮೆ ಹಮ್ಮೂನ ನೆನಪಾಗುವುದು. ಆದರೆ ಇಂದು ಆ ಹಮ್ಮೂನು ಇದಿರು ಹೋದರೆ ತನ್ನನ್ನು ಮಾತಾಡಿಸುವುದಿಲ್ಲ! ೧೯೨೦ ರ ಅಗಸ್ಟ. ಟಿಳಕರು ಗತಿಸಿದ ಕೆಲ ದಿನಗಳಲ್ಲಿಯೆ ನಡೆದ ಘಟನೆ. ಅಂದಿನ ಘಟನೆಗೆ ಇಂತಹ ಅದ್ಭುತ ಭವಿಷ್ಯ ವನ್ನು ಯಾರೂ ಎಣಿಸಿದ್ದಿಲ್ಲ. ಅದೇ ಆ 'ಬರಿಗಾಲಿನ ಬನಿಯಾ'; ೧೯೨೦ರ ಅಗಸ್ಟ ತಿಂಗಳಲ್ಲಿ ಮುಸಲ್ಮಾನರ ಖಿಲಾಫತ್ ಚಳವಳವದ ಮುಂದಾಳುತನ ವನ್ನು ವಹಿಸಿ 'ಅಸಹಕಾರ' ಎಂಬ ಹೊಸ ಶಸ್ತ್ರವನ್ನು ಹೂಡಿದ. ಆ ಅಸಹ ಕಾರದ ಪರಿಣಾಮವಾಗಿ ಇಂದುಮುಸಲ್ಮಾನರು ಬೇರೆ ರಾಷ್ಟ್ರ ಎಂದು ನಮ್ಮಿಂದ ಸಿಡಿದು ಹೋಗಿದ್ದಾರೆ! ಈ ಕೊನೆ ನಾಟಕೀಯವಲ್ಲದೆ ಮತ್ತೇನು? ಅದೇ ಅಗಸ್ಟ ತಿಂಗಳಲ್ಲಿಯೆ ಮಾಧವನು ತನ್ನ ಎಲ್ಲ ಸಮಸ್ಯೆಗಳಿಂದ ಪಾರಾದೆ ನೆಂದು ತಿಳಿದಿದ್ದನು. ತಂದೆ ಹೂಡಿದ ಮದುವೆಯ ಪ್ರಶ್ನೆ, ತನಗೆ ಕಲಿಯಲು ಕಠಿಣವಾದ ಪರಿಸ್ಥಿತಿ, ಅನಂತನು ಇಂಗ್ಲಂಡಕ್ಕೆ ಹೋಗುವವನೆಂಬುದನ್ನು ಕೇಳಿ ಬಡವನಾದ ತನ್ನ ಭವಿತವ್ಯಕ್ಕಾಗಿ ನಿರಾಶೆ— ಇಂತಹ ಆಂತರಿಕ ಕಳ ವಳಗಳಿಂದ ತಾನು ದಿಕ್ಕುಗಾಣದಂತಾಗಿದ್ದ. ಆದರೆ ಮುಂದೆ ಒಂದು ತಿಂಗಳ ಲ್ಲಿಯೆ ತನ್ನ ಎಲ್ಲ ತೊಡಕುಗಳು ಬಿಟ್ಟುವೆಂದನಲ್ಲದೆ, ಜೀವನಕ್ಕಾಗಿ ಭವಿಷ್ಯ ತ್ತಿಗಾಗಿ ಹೊಸ ಆಕಾಂಕ್ಷೆಯನ್ನು ಅನುಭವಿಸಿದ್ದ ಮಾಧವ. ಆ ಅನುಭವ ಸ್ಮರಣೆಗೆ ಬಂದರೆ ಇಂದು ಕೂಡ ಮೈಯಲ್ಲಿ ಕಸುವು ಬಂದಂತಾಗುತ್ತಿತ್ತು ತನಗೆ. ದಣಿದು ಕುರ್ಚಿಯಲ್ಲಿ ಬಿದ್ದುಕೊಂಡಾಗ, ನಲವತ್ತೈದರ ವಯಸ್ಸಿಗೇ ಹಲ್ಲು ಕಳೆದುಕೊಂಡಿರುವಾಗ ಅಂದಿನ ಅನುಭವವನ್ನು ಮೆಲುಕಾಡಿಸುವುದೆ ಮಾಧವನಿಗೆ ರುಚಿಯಾಗಿದ್ದಿತು. ಆಗಿನ ಕಾಲದಲ್ಲಿ ಬದುಕಿದ್ದ ಭಾಗ್ಯ ಎಂದಿದ್ದ; ಇಂದು ಬದುಕುವುದು ಬೇಡ ಎನ್ನಿಸಿತು ಅವನಿಗೆ. ದೇಹ ದುರ್ಬಲ ವಾಗಿದೆ. ಅದೇ ಕಾರಣವಿರಬಹುದೆ ಈ ನಿರಾಸೆಗೆ? ಪಾಪ! ದೇಹಕ್ಕಾಗಿ ಕನಿ ಕರ ಹುಟ್ಟಿತು ಮಾಧವನಿಗೆ. ಇಪ್ಪತ್ತೇಳು ವರುಷಗಳ ಹಿಂದೆ ತನಗಿದ್ದ ದೇಹವೆ ಈಗಲೂ ಇದೆಯೆ—ಎಂದು ಸಂದೇಹ ಪಡುವಂತಾಯಿತು. ಅಂದಿನ

ಆ ದೇಹ, ಮಾಧವನ ಆ ಮೂರ್ತಿ ಇಂದಿನ ಮೆರವಣಿಗೆಗಿಂತ ದೊಡ್ಡದಾಗಿ ಮಾಧವನ ಕಣ್ಣು ಕಟ್ಟಿತು.

೫

. . . .

೧೬–೧೭ ವಯಸ್ಸಿನ ಮಾಧವನಿಗೆ ದೇಹದ ಪರಿವೆಯೆ ಇದ್ದಿರಲಿಲ್ಲ. ತನ್ನ ದೇಹದಲ್ಲಿ ಅಷ್ಟೊಂದು ದಾರ್ಢ್ಯವಿದೆ ಎಂಬ ಹೆಮ್ಮೆ. 'ಕೂಳಿಲ್ಲದೆ ಸಾಯುವಿ' ಎಂದು ಯಾರಾದರೂ ಹೆದರಿಸಿದ್ದರೆ 'ಕೂಳನ್ನೆ ನಂಬಿಕೊಂಡು ನಿಂತಿಲ್ಲ ನನ್ನ ದೇಹ, ಉಪವಾಸವನ್ನು ದಕ್ಕಿಸಿಕೊಂಡು ರಕ್ತವನ್ನಾಗಿ ಮಾಡುವುದು' ಎಂದು ಹೇಳುವವ. ೧೯೨೦ ರ ಸಪ್ಟೆಂಬರದಲ್ಲಿ ಅಂತಹ ಹೆದರಿಕೆಯನ್ನೂ ತೋರಿಸುವ, ತಾನೂ ಅಂತಹ ಉತ್ತರವನ್ನು ಕೊಡುವ ಸಂದರ್ಭ ಒದಗಿತು ಮಾಧವನಿಗೆ. ಆ ಸಂದರ್ಭವೆಂದರೆ ಆ ಸಪ್ಟೆಂಬರದ ಮೊದಲ ವಾರದಲ್ಲಿ ಕಲಕತ್ತೆಯಲ್ಲಿ ನಡೆದ ಕಾಂಗ್ರೆಸದ ವಿಶೇಷ ಅಧಿವೇಶನ. ಲೋಕಮಾನ್ಯರ ಸ್ಮಶಾನಯಾತ್ರೆ ಮುಗಿದ ಒಂದು ತಿಂಗಳಲ್ಲಿಯೆ ಹಿಂದುಸ್ತಾನಕ್ಕೆ ನಾಯಕ ದೊರಕಿದ ಎಂದರು ಮಾಧವನು ಮತ್ತು ಅವನ ಗೆಳೆಯರು. ಹಮ್ಮೂನ 'ಬರಿಗಾಲಿನ ಬನಿಯಾ'ನೇ ಕಲಕತ್ತೆಯಲ್ಲಿ ತನ್ನ ನಾಯಕತ್ವದ ಧ್ವಜವನ್ನು ನಿಲ್ಲಿಸಿದ್ದ. ಎಂತಹ ದಿನಗಳವು! ಮಾಧವನು ನಸುಕಿನಲ್ಲಿಯೆ ಎದ್ದು ಹೊರಗೋಡಿ ಮುಂಬಯಿ ಕ್ರಾನಿಕಲ್ ಪತ್ರಿಕೆಯನ್ನು ಕೊಂಡು ತರುತ್ತಿದ್ದ. ಗೆಳೆಯರೆದುರು ಗಟ್ಟಿಯಾಗಿ ಓದುತ್ತಿದ್ದ. ಈ ನಾಲ್ವರೂ ಇದುವರೆಗೆ ತಮಗೆ ಗೊತ್ತಿಲ್ಲದ ಅನೇಕ ಸಂಗತಿಗಳನ್ನು ಓದಿ ಬೆರಗಾಗುತ್ತಿದ್ದರು. ಒಮ್ಮೊಮ್ಮೆ ನಾಚುತ್ತಿದ್ದರು ಕೂಡ. ಒಂದು ಸಂದರ್ಭದಲ್ಲಿ ಹಮ್ಮೂನು 'ಜಾಲಿಯನ್‌ವಾಲಾ ಬಾಗದಲ್ಲಿ ನಿಜವಾಗಿ ಆದದ್ದಾದರೂ ಏನು?' ಎಂದಾಗ ಮರುಗಳಿಗೆಯಲ್ಲಿ ಮಿಕ್ಕವರೊಡನೆ ಹಮ್ಮೂನಿಗೆಯೆ ನಾಚಿಕೆಯಾಗಿತ್ತು.

'ಈಸ್ಟ ಇಂಡಿಯಾ ಕಂಪನಿಯು ಕಾಲದೊಳಗ ಮಾಡಿದ್ದನ್ನೆ ಈಗ ಮಾಡ್ತಾರ' ಎಂದ ಶ್ರೀಧರ. ಮಾಧವನು ಒಪ್ಪಿದನು. 'ಆಗಲೂ ಜನರು ಇಂಗ್ಲಿಶರ ಪ್ರಭುತ್ವವನ್ನು ಎದುರಿಸಿದ್ದರು. ಈಗಲೂ ಹಾಗೇ ಆದೀತು ಅಂತ

ಮೊದಲೇ ನಮ್ಮನ್ನ ಹೆದರಿಸ್ತಾರ—ಈ ಜಾಲಿಯನ್‌ವಾಲಾ ಬಾಗದಂತಹ ಅತ್ಯಾಚಾರದಿಂದ' ಎಂದ.

'ಆದರೂ ಬೇಕಾದವರ್ನ ಬೀದಿಯೊಳಗ ಅಂಬೆಗಾಲಿನಿಂದ ನಡೆಸೋ-ದಂದ್ರ—'

'ನಿನಗ್ಗೊತ್ತಿಲ್ಲ, ಹಮ್ಮೂ. ನಾಯೀನ್ನ ನಾಯಿಯಂತೆ ನಡೆಸಿ ಕೊಂಡ್ರೇನೆ ಯಜಮಾನನ ಯಜಮಾನಿಕೆ.' ಶ್ರೀಧರನ ಈ ಮಾತಿಗಾಗಿ ಮಾಧವನಿಗೆ ಆಶ್ಚರ್ಯವಾಯಿತು. ಈ ಕೆಲ ದಿನಗಳಲ್ಲಿ ಶ್ರೀಧರನು ಮೇಲಿಂದ ಮೇಲೆ ಖಂಡತುಂಡ ವಿಧಾನಗಳನ್ನು ಮಾಡುತ್ತಿದ್ದ. ಅನೇಕ ದಿನಗಳಿಂದ ಒಳಗೆ ಹುದುಗಿದ ವಿಚಾರಗಳನ್ನು ದಬ್ಬಿ ಹೊರದೂಡುವವನಂತೆ ಶ್ರೀಧರನು ಮಾತನಾಡುತ್ತಿದ್ದ.

'ಪಾರ್ಲಮೆಂಟಿಗೆ ಡೆಪ್ಯುಟೇಶನ್ ಒಯ್ಯಲಾರದೆ ಇದಕ್ಕ ಉಪಾಯನೆ ಇಲ್ಲ' ಎಂದ ಅನಂತ.

'ಬೇಕಾದ್ದರ ನೆವಮಾಡಿಕೊಂಡು ಇಂಗ್ಲಂಡಕ ಹೋಗೋ ಮಾತು ಎತ್ತುವಿ ನೀ' ಎಂದ ಹಮ್ಮೂ. ಮಾಧವನು ತನ್ನ ವಿಚಾರವನ್ನು ಹೇಳಿದ. 'ನಾವು ಗಟ್ಟಿ ಆದರೆ ಅವರು ತಾವೇ ಹಣ್ಣಾಗ್ತಾರ.'

'ಗಾಂಧೀನೂ ಅದೇ ಹೇಳ್ತಾನ.'

'ಹೇಳೋದು ಸುಲಭ, ಹಮ್ಮೂ. ಆದರೆ ನಾವು ಅಂದ್ರ ಯಾರು?' ಅನಂತನು ಪ್ರಶ್ನೆ ಹಾಕಿದನು.

'ಅದೇನು ಸುಳ್ಳಲ್ಲ' ಎನ್ನುತ್ತ ತಲೆ ತೂಗಿದ ಹಮ್ಮೂ. 'ನಾವಂದ್ರೇನು? ಒಂದು ದೇಶ ಅಲ್ಲ, ಒಂದು ಜಾತಿ ಅಲ್ಲ. ಅಂತೇ ಬ್ರಿಟಿಶರು ಇಷ್ಟು ವರ್ಷ ದಿಂದ ನಮ್ಮ ಮ್ಯಾಲೆ ರಾಜ್ಯ ನಡಸ್ತಾರ.'

'ಬ್ರಿಟಿಶರು ರಾಜ್ಯ ನಡೆಸಿದ ಕಾರಣಾನೇ ಬ್ಯಾರೆ' ಎಂದ ಮಾಧವ.

. . . . .

'ಮಹಾತ್ಮಾ ಗಾಂಧೀಕಿ ಜೈ' . . 'ಭಾರತಮಾತಾಕೀ ಜೈ'! ದೂರ ದಿಂದ ಜಯಘೋಷದ ದನಿ ಕೇಳಬಂದಿತು. ಮಾಧವನು ತಲೆ ಜಾಡಿಸಿದನು. ಇದೇನು ಹುಚ್ಚು! ಎಚ್ಚರದಿಂದಿರುವಷ್ಟು ಕೂಡ ತ್ರಾಣವಿಲ್ಲವೆ ತನಗೆ? ಇದೆಂತಹ ದಡ್ಡತನ! ಇಂದಿನ ಮೆರವಣಿಗೆಯನ್ನು ನೋಡಬೇಕೆಂದು ಕುಳಿತಾಗ ಹಿಂದಿನದನ್ನು ನೆನೆದುಕೊಳ್ಳಬೇಕೆ?....'ಭಾರತ ಮಾತಾಕೀ ಜೈ!'....

ಬ್ರಿಟಿಶರು ರಾಜ್ಯ ನಡೆಸಿದ ಕಾರಣಾನೇ ಬ್ಯಾರೆ ಎಂದು ವಟಗುಟ್ಟಿದ ಮಾಧವ. ಬ್ರಿಟಿಶರು ಹಿಂದುಸ್ತಾನ ಗೆದ್ದಿರಲಿಲ್ಲ, ಹಿಂದುಸ್ತಾನ ಬ್ರಿಟಿಶರಿಗೆ ಸೋತಿತ್ತು.

. . . . .

'ಎಲ್ಲಾದರ ಅರ್ಥ ಒಂದೇ' ಎಂದ ಹಮ್ಮ್ಯಾ. 'ಅವರು ಗೆದ್ದರು ಅಂದ್ರೇನು, ನಾವು ಸೋತೆವು ಅಂದ್ರೇನು ?'

'ಗೆದ್ದಿದ್ದರೆ ಅವರಿಗೆ ಹಿಂದುಸ್ತಾನ ಆಳೋ ಅಧಿಕಾರ ಬರ‍್ತಿತ್ತು. ಈಗ ಅದೇ ಇಲ್ಲ ಅಂತಾನ ಮಾಧು.'

ಈ ಮಾತನ್ನಾಡಿದ ಶ್ರೀಧರನನ್ನು ಹಮ್ಮ್ಯಾ ಕೆಣಕಿದ. 'ಇಲ್ಲಿ ನೋಡು, ಶ್ರೀಧರಾ. ಬಹಾಳ ದಿವಸದ ಮಾತು ಒಡೆದ ಹುಡುಗನ್ಹಾಂಗ ಅರ್ಥ ಇಲ್ಲದ್ದನ್ನ ವಟವಟಿಸಬ್ಯಾಡ.'

'ಸಪ್ಟೆಂಬರ ತಿಂಗಳ ಸುರುವಾಯ್ತು ಈ ಹೊತ್ತು. ನೀವೇನು terminalದ ಅಭ್ಯಾಸ ಮಾಡುವವರೊ ಏನು–' ಎನ್ನುತ್ತ ಅನಂತ ಎದ್ದನು.

'ಏ, ಕೂಡಿಲ್ಲಿ' ಎಂದು ಹಮ್ಮ್ಯಾ ಅವನನ್ನು ಎಳೆದು ಕೂಡ್ರಿಸುತ್ತ, ವರ್ಷಾ ಪರೀಕ್ಷೆ ಪಾಸಾಗ್ತೀಯಲ್ಲ, ಬ್ಯಾಸರಿಕೆ ಬಂದಿಲ್ಲ ನಿನಗೆ ?'

'ನನಗ ಈ ಹರಟೀನೂ ಬ್ಯಾಸರ ಆಯ್ತು?'

'ಹರಟೆ ಅಲ್ಲ ಇದು, ಪರೀಕ್ಷಾ ಅಂತ ತಿಳಿ.'

'ಹೆಃ ! ಇದೆಂಥಾ ಪರೀಕ್ಷಾ !'

'ಪ್ರಶ್ನೆ ಕೇಳ್ತೀವಿ. ಅಂದ್ಮ್ಯಾದ್ಮ್ಯಾ ಪರೀಕ್ಷಾ ಆಹುದಲ್ಲೋ ? ಉತ್ತರ ಕೊಡು:– ಬ್ರಿಟಿಶರು ನಮ್ಮ ಮ್ಯಾಲೆ ರಾಜ್ಯ ನಡೆಸಿದ ಕಾರಣ ಏನು ?

'ಹಮ್ಮ್ಯಾನಂಥವನ ಜೋಡಿ ಹರಟಿ ಹೊಡೆಯೋದ್ರಾಗೇ ಹೊತ್ತು ಕಳೀತೀವಿ, ಅಂತ.'

'ಏನು, ನೀನು ಇಂಗ್ಲಂಡಕ ಕಲೀಲಿಕ್ಕೆ ಹೊರಟೇದಿಯಂತೊ?' ಎಂದು ಶ್ರೀಧರನು ನಡುವೆ ಬಾಯಿಹಾಕಿದ.

ಮಾಧವನಿಗೆ ನಿರಾಶೆಯಾಯಿತು. ಪ್ರತಿಯೊಂದು ಚರ್ಚೆಯೂ ಚಿಲ್ಲರೆ ಮಾತಿಗೆ ಇಳಿಯುವುದಲ್ಲ ? ಕಾಲೇಜಿನ ವಿದ್ಯಾರ್ಥಿಗಳಾದ ತಾವು ಒಂದು ವಿಷಯವನ್ನು ಬುದ್ಧಿವಂತಿಕೆಯಿಂದ ಚರ್ಚಿಸಬಾರದೆಂದರೆ ? ಅಥವಾ

ಕಾಲೇಜಿನ ವಿದ್ಯಾರ್ಥಿಗಳಾದ್ದರಿಂದಲೆ ಇಂತಹ ಚರ್ಚೆಗಿಂತ ಟರ್ಮಿನಲ್ ಪರೀಕ್ಷೆ ಮಹತ್ತ್ವದ್ದಾಗಿದೆಯೆ? ಬ್ರಿಟಿಶರು ನಮ್ಮ ಮೇಲೆ ರಾಜ್ಯ ನಡೆಸುವ ಕಾರಣ ಇಲ್ಲಿರಬಹುದೆ? ನಮ್ಮ ಇಡಿಯ ದೇಶವೆ ಕಾಲೇಜಿನ ವಿದ್ಯಾರ್ಥಿಯಾಗಿ ದೇಶಕ್ಕಿಂತ ಹೊಟ್ಟೆ ತುಂಬಿಕೊಳ್ಳುವ ಪರೀಕ್ಷೆಯೆ ಮಹತ್ತ್ವದ್ದೆಂದು ತಿಳಿಯುತ್ತಿರಬಹುದೆ? ಒಂದು ವೇಳೆ ನಾವೆಲ್ಲರೂ ಉಪವಾಸದ ಬರಗಾಲದ ಹೊಡೆತಕ್ಕೆ ಸಿಕ್ಕರೆ—? ಆಗ ನಮಗೆ— 'ಹಂ. ತಿಳಿಯಿತು' ಎಂದ ಗಟ್ಟಿಯಾಗಿ.

'ಏನು?'

ಮೂವ್ವರೂ ಏಕಕಾಲಕ್ಕೆ ತನ್ನನ್ನು ಪ್ರಶ್ನಿಸುವುದನ್ನು ಕಂಡು ತಾನು ಏನೋ ಗಟ್ಟಿಯಾಗಿ ಮಾತನಾಡಿರಬೇಕು ಎಂಬ ಅರಿವು ಬಂದಿತು ಮಾಧವನಿಗೆ. ಮುಗುಳ್ನಗೆಯಿಂದಲೇ ಹೇಳಿದ— 'ಪರೀಕ್ಷೆ ಪಾಸಾಗುವದು ಮುಖ್ಯ!'

೬

ಮುಂದೆ ಎರಡೇ ದಿವಸಗಳಲ್ಲಿ ಮಾಧವನ ಮನಃಸ್ಥಿತಿಯೆ ಬದಲಾಯಿತು. ವಿಚಾರಗಳಿಂದ ತಲೆಯನ್ನು ತುಂಬಿಕೊಂಡು ಹೆಚ್ಚಾಗಿ ತನ್ನಷ್ಟಕ್ಕೆಯೆ ಹೊತ್ತುಗಳೆಯುತ್ತಿದ್ದ. ಮನಸ್ಸಿನಿಂದ ಮಾತನಾಡುವುದು ಶ್ರೀಧರನೊಬ್ಬನ ಕೂಡ. ಇದುವರೆಗೆ ಅನಂತನ ಅಭ್ಯಾಸವೃತ್ತಿಗಾಗಿ ಮಾಧವನಿಗೆ ಆದರವಿದ್ದಿತು,ಅದಕಾಗಿ ಈಗ ಅವನಿಗೆ ಅಸಹ್ಯವೆನ್ನಿಸಿತು; ಹಮ್ಮೂನ ವಿನೋದವೃತ್ತಿಗಾಗಿ ಸಹಕಾರವಿದ್ದಿತು, ಈಗ ಅದು ಬೇಸರವಾಗತೊಡಗಿತು. ಏನೊ ಒಂದು ಅದ್ಭುತ ಘಟನೆ ನಡೆಯುವದು ಎಂಬುದೊಂದು ಭಾವನೆ, ಅದು ಏನು—ಎಂಥದು ಎಂಬುದರ ಕಲ್ಪನೆ ಇಲ್ಲ. ಮುಖ್ಯವಾಗಿ ಇದುವರೆಗೆ ತನ್ನ ತಲೆ ತಿನ್ನುತ್ತಿದ್ದ ಪ್ರಶ್ನೆಗಳು—ಮದುವೆಯ ವಿಷಯ, ಶಿಷ್ಯವೃತ್ತಿಯ ಆಶೆ, ಅಭ್ಯಾಸದ ಹಂಬಲ ಇವೆಲ್ಲ—ಚಿಲ್ಲರೆಯಾಗಿ ತಳ ಕಂಡುದಕ್ಕೆ ಅವನ ಮನಸ್ಸು ಹಗುರಾಗಿತ್ತು. ಶ್ರೀಧರನನ್ನು ಕೂಡಿಕೊಂಡು ಚೌಪಾಟಿಯ ಕಡೆ ಹೋದ; ಜನಸಂದಣಿ. ಅದನ್ನು ತಪ್ಪಿಸುವ ಹಂಚಿಕೆಯಿಂದ ಇಬ್ಬರೂ ದೂರದೂರ ನಡೆದು ಹೋದರು—ಮಾತನಾಡದೆ. ಮಾಧವನ ಮನಸ್ಸು ಸಂತ್ರಸ್ತವಾಗಿದೆ ಎಂಬುದನ್ನು ಶ್ರೀಧರ ಬಲ್ಲ; ಶ್ರೀಧರನೊಡನೆ ಮಾತನಾಡಿದರೆ ವಿಚಾರಗಳಿಗೆ

ಸಮಾಧಾನ ದೊರೆತೀತೆಂದು ಮಾಧವನ ಎಣಿಕೆ. ಜನರ ಸುಳಿವಿಲ್ಲದ ತಾವಿನಲ್ಲಿ ಇಬ್ಬರೂ ಕುಳಿತುಕೊಂಡರು. ಕತ್ತಲಾಗುತ್ತ ನಡೆದದ್ದರಿಂದ ಒಬ್ಬನ ಮುಖ ಮತ್ತೊಬ್ಬನಿಗೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಕೊನೆಗೆ ಮಾಧವನೆ ಮಾತಿಗೆ ಮೊದಲು ಮಾಡಿದ.

" ಶ್ರೀಧರಾ, ನಾನು ಕಾಲೇಜನ್ನು ಬಿಟ್ಟುಕೊಡುವೆ. "

ಈ ಮಾತು ಬರುವುದೆಂದು ಶ್ರೀಧರನು ಪೂರ್ತಿಯಾಗಿ ಅರಿತಿದ್ದನು. ಅದಕಾಗಿ ಅವನು ತನ್ನ ಉತ್ತರವನ್ನೂ ಸಿದ್ಧಗೊಳಿಸಿದ್ದನು. ಆದರೆ ಸದ್ಯಕ್ಕೆ ಮಾತ್ರ " ಯಾಕೆ " ಎಂದಿಷ್ಟೆ ಕೇಳಿದನು.

" ಯಾಕೆಂದರೇನು ? ನಿನ್ನಿಂದಾದರೂ ಸಮ್ಮತಿ–ಸಹಾನುಭೂತಿ ದೊರೆಯುವುದೆಂದು ನಂಬಿರುವೆ. "

" ಹಣದ ತೊಂದರೆಗಾಗಿ ಇದ್ದರೆ, ನೀನು ಬಿಡುವ ಕಾರಣವಿಲ್ಲ. "

" ಹಣದ ತೊಂದರೆ ! " ಮಾಧವನು ನಕ್ಕನು. " ಈಗಿದ್ದದ್ದು ಮನಸ್ಸಿನ ತೊಂದರೆ. ಶಾಲೆ-ಕಾಲೇಜುಗಳಿಗೆ ಬಹಿಷ್ಕಾರ ಹಾಕಬೇಕೆಂದು ಮುಂದಾಳುಗಳು ಸಾರುವಾಗ ನಾವು ಕಿವಿ ಮುಚ್ಚಿಕೊಳ್ಳುವುದೆಂದರೆ ? "

ಶ್ರೀಧರನು ತುಸು ಹೊತ್ತು ಸುಮ್ಮನಿದ್ದ.

" ಯಾಕೆ ? ನಿನ್ನ ಒಪ್ಪಿಗೆ ಇಲ್ಲವೆ ? " ಎಂದು ಆತುರದಿಂದ ಕೇಳಿದ ಮಾಧವ.

" ಇಲ್ಲ " ಎಂದ ಶ್ರೀಧರ.

ಮಾಧವನಿಗೆ ಸಿಡಿಲು ಬಡಿದಂತಾಯಿತು, ನಿಂತಿದ್ದ ನೆಲದ ಆಧಾರವೆ ಕಳಚಿದಂತಾಯಿತು.

" ಶ್ರೀಧರಾ, ನಿನ್ನ ಒಪ್ಪಿಗೆ ಇಲ್ಲವೆ ? ಚಳವಳ ಪ್ರಾರಂಭವಾದರೆ ನೀನು ಕಾಲೇಜನ್ನು ಬಿಡುವುದಿಲ್ಲವೆ ? "

" ಕಾಲೇಜದಿಂದ ಹೊರಬೀಳುವೆ. "

" ಎಂದರೆ—? ಎಂದರೆ—? " ಮಾಧವನಿಗೆ ಸಂಶಯ ಬಂದಿತು. " ನಾನು ದೇಶಸೇವೆಯನ್ನು ಮಾಡಬಾರದು—"

ಶ್ರೀಧರನು ನಡುವೆಯೆ ಮಾತನಾಡಿದ. " ಕಾಲೇಜ ಬಿಟ್ಟರೆ ದೇಶ-ಸೇವೆ ಅಲ್ಲ "

" ಹಾಗಾದರೆ ನೀನು ಬಿಡುವುದೇಕೆ ? "

" ನಾನು—ನಾನು—" ಶ್ರೀಧರನು ವಿಚಾರಪೂರ್ವಕವಾಗಿ ಮಾತನಾಡುವವನಂತೆ ಸಾವಕಾಶವಾಗಿ ಹೇಳುತ್ತಿದ್ದ, " ನಾನು—ಕಾಲೇಜನ್ನು ಬಿಟ್ಟುಕೊಡುವುದು ನನ್ನ ಅನುಕೂಲತೆಗಾಗಿ. "

ಮಾಧವನಿಗೆ ಧೈರ್ಯ ಬಂದಿತು. ಶ್ರೀಧರನು ವಯಸ್ಸಿನಲ್ಲಿ ತನಗಿಂತ ತುಸು ಚಿಕ್ಕವ, ಬುದ್ಧಿಯಿಂದ ತಾನು ಸ್ಕಾಲರ್ ಎಂಬ ವಿಚಾರದಿಂದ ಧೈರ್ಯ ಬಂದಿತು. " ಶ್ರೀಧರಾ, ಇಂದಿನ ವಾತಾವರಣವನ್ನು ನಾವು ಚನ್ನಾಗಿ ತಿಳಿದುಕೊಳ್ಳಬೇಕಾಗಿದೆ. ಕಾಂಗ್ರೆಸದ ಗೊತ್ತುವಳಿಯಲ್ಲಾದರೂ ಈ ಮಾತನ್ನು ಸ್ಪಷ್ಟವಾಗಿ ಹೇಳಿದೆ. ಒಂದು, ಖಿಲಾಫತ್ ಅನ್ಯಾಯ, ಇನ್ನೊಂದು ಜಾಲಿಯನ್‌ವಾಲಾ ಬಾಗದ ಅನ್ಯಾಯ; ಇವೆರಡೇ ಮಾತಿಗಾಗಿ ಎಷ್ಟೋ ಪ್ರಯತ್ನಪಟ್ಟರೂ ನ್ಯಾಯ ದೊರಕಲಿಲ್ಲ. ಆದ್ದರಿಂದ ಈಗ ನಮಗೆ ಎರಡನೆಯ ಉಪಾಯವೆ ಇಲ್ಲ. ಇಷ್ಟೇಕೆ? ಆ ಗೊತ್ತುವಳಿಯ ಶಬ್ದಗಳನ್ನು ಪಾಠ ಮಾಡಿರುವೆ—The congress is further of opinion that there is no course left open for the people of India but to approve of and adopt the policy of progressive Non-violent Non-co-operation inaugurated by Mahatma Gandhi until…"

ಶ್ರೀಧರ ಮತ್ತೆ ನಡುವೆ ಮಾತನಾಡಿದನು; ಮಾತನಾಡುವಾಗ ಅವನ ದನಿಯಲ್ಲಿ ನಗೆ ಇದ್ದಿತು.

" ನನಗೂ ಗೊತ್ತಿದೆ, ಮಾಧೂ; ಆ ಗೊತ್ತುವಳಿಯ ಬಗ್ಗೆ ನಿನ್ನಕಿಂತ ಹೆಚ್ಚು ವಿಚಾರ ಮಾಡಿರಬಹುದು ನಾನು, ಯಾಕೆಂದರೆ ನಿನ್ನಂತೆ ನಾನು Scholarನಲ್ಲ, ನನಗೆ ಬೇಕಾದಷ್ಟು ವೇಳೆ ಇದೆ—"

" ಸುಟ್ಟಿತು ನನ್ನ Scholar! ಯಾರಿಗೆ ಬೇಕಾಗಿದೆ—"

" ಸಿಟ್ಟಿಗೇಳಬೇಡ, ಮಾಧೂ. ನಾನೂ ವಿಚಾರ ಮಾಡಿದ್ದೇನೆ ಎಂದಿಷ್ಟೆ ನಾನು ಹೇಳುವುದು ನೋಡು. ಅವೆರಡು ಅನ್ಯಾಯಗಳನ್ನು ಎಷ್ಟು ಪ್ರಯತ್ನಪಟ್ಟರೂ ಸರಿಪಡಿಸಿಕೊಳ್ಳುವುದಾಗಲಿಲ್ಲ ನಮ್ಮಿಂದ, ಅಲ್ಲವೆ ? ಇದರರ್ಥವೇನು ? ನಾವು ಪೂರ್ತಿಯಾಗಿ ದುರ್ಬಲರು—ಎಂದಲ್ಲವೆ ? "

" ಛೆ—"

" ತಡೆ. ನನಗೆ ಗೊತ್ತಿದೆ. ನಾವು ದುರ್ಬಲರಲ್ಲ ಎಂದು ಈಗ ತೋರಿಸೋಣ—ಚಳವಳವನ್ನು ಹೂಡೋಣ. ಈ ಮಾತು ಸಮರ್ಪಕ, ಆದರೆ ಕೃತಿ—ಅಸಾಧ್ಯ. "

" ಎಲ್ಲರೂ ಇಂತಹ ಮಾತನ್ನೇ ಆಡಿದರೆ ಅಸಾಧ್ಯವೆ. " ಮಾಧವನ ದನಿ ಬಿರುಸಾಗಿತ್ತು, ಮನ ನೊಂದಿತ್ತು.

" ಆದರೆ ನನ್ನ-ನಿನ್ನಂತಹರಾದರೂ ಈ ಚಳವಳದಲ್ಲಿ ಸೇರಬಾರದೇಕೆ? ಲಕ್ಷಾವಧಿ ಜನರು ದರ್ಬಲರಿದ್ದರೂ ಹತ್ತು ಜನ ಸಾಹಸಿಗರಾದರೆ ಸಾಕು. "

" ಮಾಧವಾ, ನಿನ್ನ ಮನಸ್ಸು ಸಿದ್ಧವಾದಂತಿದೆ. ನನ್ನನ್ನು ಕೇಳಿ ಉಪಯೋಗವೇನು ? "

" ಬುದ್ಧಿವಂತರೆ ಈ ಹೊಣೆಯನ್ನು ಹೊರಬೇಕಲ್ಲವೆ ? "

" ನಿಜ. " ಶ್ರೀಧರನು ಕಾಲು ಚಾಚಿ ನಿಧಾನವಾಗಿ ಬಿದ್ದುಕೊಂಡು ಮಾತನಾಡಿದನು. ಮಾತನಾಡುವಾಗ ಅವನು ಮಾಧವನ ಕಡೆ ನೋಡುತ್ತಿರಲಿಲ್ಲ. ಕತ್ತಲೆಯಾಗಿದ್ದರೂ ಎದುರು ಏನನ್ನೊ ದಿಟ್ಟಿಸುವವನಂತೆ ನೋಡುತ್ತ ಮಾತನಾಡಿದನು. " ನಿಜ. ಆದರೆ ಬುದ್ಧಿವಂತರೆಲ್ಲರೂ ಬೇರೆ ಹಾದಿಯನ್ನು ಹಿಡಿದಿದ್ದಾರೆ. ನಮ್ಮಲ್ಲಿಯ ಬುದ್ಧಿವಂತರಿಂದಲೆ ಬ್ರಿಟಿಶರ ರಾಜ್ಯ ನಮ್ಮ ಮೇಲೆ ನಡೆದಿದೆ. "

" ಅದಕಾಗಿಯೆ ಅಸಹಕಾರದ ಚಳವಳವನ್ನು ಹೂಡುವುದಲ್ಲವೆ ? "

" ಅಹುದು. ಸಹಕಾರ ಮಾಡುವವರು ಚಳವಳ ಹೂಡಿದರೆ ಅಸಹಕಾರವಾದೀತು. ನಾನು-ನೀನು ಕಾಲೇಜ ಬಿಟ್ಟರೆ, ವಕೀಲರು ವಕೀಲಿಯನ್ನು ಬಿಟ್ಟರೆ ಬ್ರಿಟಿಶರ ಆಡಳತೆಗೆ ಧಕ್ಕೆ ತಗಲುವುದು ಹೇಗೆ ? "

" ನೋಡುವೆಯಂತೆ. ಇಂದು ನಾನೂ ನೀನೂ ಹಿಂಜರಿದರೂ ಸಾವಿರಾರು—ಅದೇಕೆ—ಲಕ್ಷಾವಧಿ ಜನರು ಈ ಚಳವಳದಲ್ಲಿ ಧುಮುಕುವರೊ ಇಲ್ಲವೊ ನೋಡುವೆಯಂತೆ. "

" ಆ ಬಗ್ಗೆ ನನಗೆ ಸಂಶಯವಿಲ್ಲ, ಮಾಧೂ. ಮನುಷ್ಯನ ಸ್ವಭಾವ ವಿವಿಧವಾಗಿದೆ. ಲಕ್ಷಾವಧಿ ಜನರೂ ಈ ಚಳವಳದಲ್ಲಿ ಸೇರಬಹುದು. ಆದರೆ

ಮಹಾತ್ಮಾ ಗಾಂಧಿಯವರ ಉದ್ದೇಶದ ದೃಷ್ಟಿಯಿಂದ ತಕ್ಕವರಾದವರು ಸೇರುವುದು ಕಡಮೆ ಎಂದೆ."

"ನಾವಿಬ್ಬರೂ ಸೇರುವುದಂತೂ ನಿಶ್ಚಯ. ಅಹುದಲ್ಲೊ ?"

"ನೀನು ಏನು ಮಾಡುವೆ ನನಗೆ ಗೊತ್ತಿಲ್ಲ. ನಾನೂ ನಿನ್ನೆಯೆ ಮನೆಗೆ ಬರೆದಿರುವೆ, ಹೊರಟು ಬರುವೆನೆಂದು."

"ಏನಂದೆ ? ನಿನ್ನೆ—" ?

ಇಬ್ಬರೂ ಗೆಳೆಯರು ಉತ್ಸಾಹದಲ್ಲಿಯೆ ಎದ್ದರು. ಮುಂದಿನ ಯೋಜನೆಯ ಬಗ್ಗೆ ನಾನಾತರದ ಎಣಿಕೆಗಳನ್ನು ಹಾಕುತ್ತ ಮರಳಿ ಕೋಣೆಗೆ ಬಂದರು. ಆ ರಾತ್ರಿ ಇನ್ನಿಷ್ಟು ವಿಚಾರ ಮಾಡಬೇಕೆಂದು ಮಾಧವ ನಿಶ್ಚಯಿಸಿದ್ದ. ಆದರೆ ಹಾಸಿಗೆಗೆ ಮಗ್ಗುಲ ತಗುಲುವುದೊಂದೆ ತಡ ಅವನನ್ನು ನಿದ್ರೆ ಮುಸುಕಿಬಿಟ್ಟಿತು.

. . . .

## ೭

ಮ—ಹಾ—ತ್ಮಾ ಗಾಂ—ಧೀ—ಕೀ ಜೈ !

ಹಿಂದುಸ್ತಾನ್ ಝಿಂದಾಬಾದ್

ಇನ್‌ಕಿಲಾಬ್ ಝಿಂದಾಬಾದ್

ಸದ್ದು ಸಮೀಪಕ್ಕೆ ಬಂದಂತಾಗಿ ಮತ್ತೆ ದೂರ ದೂರ ನಡೆದಂತೆ ಕೇಳತೊಡಗಿತು. ಇದೇನು ? ಮೆರವಣಿಗೆ ಈ ಬೀದಿಯಲ್ಲಿ ಬರುವುದಿಲ್ಲವೆ ? ಒಂದಾನೊಂದು ಕಾಲದಲ್ಲಿ ಮೈಮರೆತು ಮೆರವಣಿಗೆಗಳಲ್ಲಿ ಮೈಲು—ಮೈಲುಗಳನ್ನು ಸಂಚರಿಸುವ ಮಾಧವನಿಗೆ ಇಂದು ಕುಳಿತಲ್ಲಿಯೆ ಹಾಯ್ದುಹೋಗುವ ಮೆರವಣಿಗೆಯನ್ನು ನೋಡುವ ದಸೆ ಬಂದಿತಲ್ಲ ? ದೇಹ ದುರ್ಬಲವಾಗಿದೆ. ದೃಷ್ಟಿ ಭವಿತವ್ಯವನ್ನು ಎದುರಿಸದೆ ಹಿಂದಿನದನ್ನೆ ನೆನೆದುಕೊಳ್ಳುವ ಮುದುಕನಂತಾಗಿದೆ. ಯಾಕೆ ? ತನ್ನಂತೆಯೆ ಲಕ್ಷಾವಧಿ ಜನರು ಅದೇ ಅನುಭವವನ್ನು ಭೋಗಿಸಿದ್ದಾರಲ್ಲ? ಅವರದೂ ಇದೇ ದಸೆಯಾಗಿರಬಹುದೆ ? ಅದೇಕೆ ? ಇಂದಿಗೂ ಲಕ್ಷಾವಧಿ ಜನರು ಒಂದಾನೊಂದು ಕಾಲದಲ್ಲಿ ತಾನಿದ್ದಂತೆ ಉತ್ಸಾಹದಲ್ಲಿದ್ದಾರೆ....ಆದರೆ—ಅವರೆಲ್ಲರೂ ಇಂದಿನವರು. ಹಿಂದಿನದನ್ನು

ಅರಿಯದವರು. ಆದರೆ ತನ್ನ ಸಮಾನವಯಸ್ಕರ ಮನಃಸ್ಥಿತಿ ಏನಿರಬಹುದು? ಅಥವಾ, ಅದೊಂದು ತಲೆನೂರು ಹಾಳಾಗಿಯೆ ಹೋಯಿತೆ? ಈ ಮಾತು ನಿಜವಿದ್ದರೆ ಅಂದಿನ ಶ್ರೀಧರನ ವಿಚಾರಣೆಯೆ ನಿಜ ಎನ್ನಬೇಕಾಗುವುದು. ಛಿ!

'ಹಿಂದುಸ್ತಾನ್ ಝಿಂದಾಬಾದ್'

'ಇನ್‌ಕಿಲಾಬ್ ಝಿಂದಾಬಾದ್'

ಇದೇನು? ದನಿ ಮತ್ತೆ ಹತ್ತಿರದಲ್ಲಿ ಕೇಳುವುದು. ಸ್ವಾತಂತ್ರ್ಯದ ಮೆರೆವಣಿಗೆ ಸುತ್ತುಮುತ್ತುವ ದಾರಿ ಹಿಡಿದಿದೆ. ಮಾಧವನ ಹೃದಯಾಂತರಾಳದೊಳಗೆ ಹಳೆಯ ಹುಮ್ಮಸ ತಲೆ ಎತ್ತಿತು ಒಂದು ನಿಮಿಷ. ತಾನೂ ಮೆರವಣಿಗೆಯಲ್ಲಿ ಭಾಗವಹಿಸಿದಂತೆ ಭಾವನೆಯಾಯಿತು ಅವನಿಗೆ. 'ಅಲ್ಲಾಹೋ ಅಕ್ಬರ್' ಈ ಜಯಘೋಷ ಮನಸ್ಸಿನಲ್ಲಿ ಬರುವುದೊಂದೇ ತಡ ಮತ್ತೆ ಮಾಧವನು ಇಂದಿನ ದುರ್ಬಲ ದೇಹದ ಮಾಧವನಾದನು. 'ಅಲ್ಲಾಹೋ ಅಕ್ಬರ್!' ಈ ಜಯಘೋಷವೆ ಇಲ್ಲವಲ್ಲ? ತಾನು ತರುಣನಾಗಿದ್ದಾಗ ಈ ಜಯಘೋಷ ಕೂಗಿದಾಗೊಮ್ಮೆ ಮೊಗಲ ಅಕಬರನ ಸ್ಮರಣೆಯಾಗುತ್ತಿತ್ತು. ಈಗ ಆ ಸ್ಮರಣೆ ಅವನ ಎದೆಯನ್ನು ಚುಚ್ಚಿತು. ಅಕಬರನ ಕಾಲದಿಂದ ನಡೆದ ಪ್ರಯತ್ನ ಇಂದು ಕೊನೆಗೆ ನಿಷ್ಫಲವಾಯಿತು; ಮಾನವನ ಯತ್ನವನ್ನು ಮೀರಿತು. ಅಲ್ಲಾಹೋ ಅಕ್ಬರ್!....ತಪ್ಪು, ನನ್ನ ವಿಚಾರಸರಣಿಯೆ ತಪ್ಪು. ಶ್ರೀಧರನೆ ಅಂದು ನುಡಿದುದು ಸತ್ಯವಾದ ಭವಿಷ್ಯವಾಯಿತು....ಛಿ!. ಇದು ನನ್ನ ದುರ್ಬಲ ದೇಹದ ಗತಿಗೇಡು ವಿಚಾರ....ನಾವು ದುರ್ಬಲರಲ್ಲ....ನಮ್ಮ ಚಳವಳಕ್ಕೆ ಯಶಸ್ಸು ಬಂದಿದೆ, ಸ್ವಾತಂತ್ರ್ಯ ಸಿಕ್ಕಿದೆ....ನಮ್ಮಲ್ಲಿ ತಕ್ಕವರಿಲ್ಲ ಎಂದು ಶ್ರೀಧರನ ವಾದ....ಅದು ತಪ್ಪು. ತಕ್ಕತನದ ನಮ್ಮ ಕಲ್ಪನೆಯೆ ಆಗ ತಪ್ಪಾಗಿತ್ತು. ಸ್ಕಾಲರ್‌ನಾದ ತಾನು ಈ ಸ್ಥಿತಿಯಲ್ಲಿದ್ದರೆ, ಪರೀಕ್ಷೆಯನ್ನು ದಾಟಲಾರದ ಹಮ್ಮೂನು ಆನರೇಬಲ್ ಮಿಸ್ಟರ ಹನುಮಂತಗೌಡನಾಗಿದ್ದಾನೆ ಇದೇ ೧೯೪೭ರಲ್ಲಿ. ತಪ್ಪು ನಮ್ಮದು, ಬ್ರಿಟಿಶರು ನಮಗೆ ಕೊಟ್ಟ ಶಿಕ್ಷಣದ್ದು.

ಇನ್‌ಕಿಲಾಬ್ ಝಿಂದಾಬಾದ್

ಹಿಂದುಸ್ತಾನ್ ಝಿಂದಾಬಾದ್

ಥೂ! ಈ ಹಾಳು ಮೆರವಣಿಗೆ ಈ ಬೀದಿಯಲ್ಲಿ ಬರುವುದಾದರೂ ಯಾವಾಗ? ಮಾಧವನಿಗೆ ಬೇಜಾರಾಯಿತು. ಅವನು ಕಿಟಕಿಯನ್ನೆ ಮುಚ್ಚಿ ಬಿಡಬಹುದಾಗಿತ್ತು. ಆದರೆ ಒಳಗೆ ಬಲವಾದ ಆಸೆಯೊಂದಿದೆ. ತನ್ನ ಒಬ್ಬನೇ ಒಬ್ಬನಾದ ಮಗನು ಮೆರವಣಿಗೆಯುಲ್ಲಿದ್ದಾನೆ! ಕೈಯಲ್ಲಿ ಸ್ವಾತಂತ್ರ್ಯದ ನಿಶಾನೆಯನ್ನು ಹಿಡಿದ ತನ್ನ ಮಗನ ಉತ್ಸಾಹಭರಿತ ಮುಖವನ್ನು ನೋಡ ಬೇಕೆಂಬ ಆಸೆ ಇಲ್ಲದಿದ್ದರೆ ಮಾಧವನು ಹಾಸಿಗೆಯಿಂದೆದ್ದು ಕಿಟಕಿಯ ಎದುರು ಗಾಳಿಗೆ ಬಂದು ಕೂಡುತ್ತಿರಲೇ ಇಲ್ಲ. ಆ ಆಸೆಯ ಹಿನ್ನೆಲೆಯಲ್ಲಿ ಹೆಮ್ಮೆಯೂ ಇದ್ದಿತು. ಮಗನನ್ನು ಸ್ವಾತಂತ್ರ್ಯಯುದ್ಧದಲ್ಲಿ ಸೇರಿಸಲು ಮನಃಪೂರ್ವಕವಾಗಿ ಒಪ್ಪಿದ ತಂದೆ ತಾನೆಂದು. ಅದಕಾಗಿ ತನಗೆ ಹೆಮ್ಮೆ ಇದೆ. ಯಾಕಿರಬಾರದು? ತಂದೆಗೆ ಎದುರಾಗಿ ನಿಂತ ಅನುಭವ ತನಗಿದೆ; ಸ್ವಾತಂತ್ರ್ಯಕ್ಕಾಗಿ ಹೆಣಗಲು ಬೇಡ ಎಂದು ನಿಷೇಧಿಸಿದಾಗ ತನ್ನ ತಂದೆಗಾಗಿ ತನ್ನಲ್ಲಿ ಎಂತಹ ತಿರಸ್ಕಾರ ಮೂಡಿತ್ತು ಎಂಬುದು ಮಾಧವನಿಗೆ ಗೊತ್ತಿತ್ತು. ತಂದೆಗೆ 'ದೇಶದ್ರೋಹಿ' ಎಂದಿದ್ದನು....ಆದರೆ ಕೊನೆಗೆ ಶ್ರೀಧರನ ಮಾತೇ ನಿಜವೆಂದು ಆ ಸಂದರ್ಭದಲ್ಲೂ ಒಪ್ಪಬೇಕಾಯಿತು. 'ನಿನ್ನ ತಂದೆ ದೇಶದ ದ್ರೋಹಿ ಅಲ್ಲ, ದೇಶವೆ ನಿನ್ನ ತಂದೆಯ ದ್ರೋಹಿ' ಎಂದಿದ್ದನು ಶ್ರೀಧರ.... ಹ!....ಶ್ರೀಧರನ ವಿಚಾರಸರಣಿಯೆ ವಿಚಿತ್ರವಾಗಿದೆ. 'ದೇಶ' ಎಂದರೆ ಅದೊಂದು ಶಕ್ತಿ ಎಂದೇ ಅವನ ಭಾವನೆ....ಅದಕಾಗಿಯೆ ದೇಶ ಬೆಳೆಯಿಸಿ ದಂತೆ ಮನುಷ್ಯ ಬೆಳೆಯುವ ಎಂದು ಅವನ ವಾದ....ನಿಜವಾಗಿ ನೋಡಿದರೆ, ಅಲ್ಲಿಯ ಮನುಷ್ಯರಿದ್ದಂತೆ ಆ ದೇಶ....ಅಥವಾ, ಶ್ರೀಧರನ ಮಾತೇ ನಿಜವೆ? ....ದೇಶವೆ ನಮ್ಮನ್ನು ದುರ್ಬಲರನ್ನಾಗಿ ಮಾಡಿದೆಯೆ?

. . . .

"ದೇಶವೆ ನಮ್ಮನ್ನು ದುರ್ಬಲರನ್ನಾಗಿ ಮಾಡಿದೆ" ಎಂದು ಹಟದಿಂದ ಹೇಳಿದ ಶ್ರೀಧರ.

ಮಾಧವನ ಹಟವೂ ಹೆಚ್ಚಾಯಿತು. ಈ ದಿನ ಇಬ್ಬರೂ ಕಾಲೇಜಿಗೆ ಹೋಗಿರಲಿಲ್ಲ; 'ಬಹಿಷ್ಕಾರ' ಎಂಬ ನಿರ್ಧಾರವನ್ನು ಮಾಡಿ ಹೊರಬಿದ್ದಿ ದ್ದರು. ನಿಜವಾಗಿ ಈ ಮಾತಿಗಾಗಿ ತನಗೆ ಆನಂದವಾಗಬೇಕಿತ್ತು. ಆದರೂ ಮನಸ್ಸಿನಲ್ಲಿ ಏನೊ ಹಳಹಳಿಯಾದಂತಿದೆಯಲ್ಲ? ಮಾಧವನಿಗೆ ಸಿಟ್ಟು

ಬಂದಿತು, ತನ್ನ ಮೇಲೆಯೆ. ‘ ದೇಶಸೇವೆ ’ ಎಂಬ ಉದಾತ್ತ ಭಾವನೆಯಿಂದ ಕೈಕೊಂಡ ಕಾರ್ಯಕ್ಕಾಗಿ ಆನಂದವಾಗಬಾರದೆಂದರೆ ? ಈ ದಿನವೆ ಅವನಿಗೆ ಹೊಸದಾದಂತಾಗಿತ್ತು. ನಾಲ್ವರೂ ಯಾವಾಗಲೂ ಕೂಡಿಯೆ ಇರುವುದು ಸ್ವಭಾವದಂತಾಗಿತ್ತಾದರೂ ಈ ದಿನ ಅನಂತ ಮತ್ತು ಹಮ್ಯಾ ಇವರು ಜೊತೆಯಲ್ಲಿರಲಿಲ್ಲ. ಇನ್ನು ಅವರ ಜೊತೆಯೂ ಉಳಿಯುವಂತಿರಲಿಲ್ಲ. ಆ ದಿನ ಬೆಳಗಿನಲ್ಲಿಯೆ ಇದೊಂದು ಆಘಾತವಾಗಿತ್ತು ಮಾಧವನ ಮನಸ್ಸಿಗೆ. ಬೆಳಗಿನಲ್ಲಿ ಎಂದಿನಂತೆ ನಾಲ್ವರೂ ಒಂದೆಡೆಯಲ್ಲಿ ಸೇರಿದ್ದರು.

‘ ಕಾಂಗ್ರೆಸದೊಳಗ ಗೊತ್ತುವಳೀನೇ ಪಾಸಾಯ್ತಂದ ಮೇಲೆ ನಾವು ಕಾಲೇಜ ಬಿಡಲೇಬೇಕಾಯ್ತು ’’ ಎಂದು ಮಾಧವ ಪ್ರಸ್ತಾಪಿಸಿದ.

ಅನಂತ ಹಮ್ಯಾನ ಕಡೆ ನೋಡಿದ. ಹಮ್ಯಾ ಗಂಟಲು ‘ ಸಾಫ ’ ಮಾಡಿಕೊಂಡ. ಅಷ್ಟೆ. ಆದರೆ ಮುಂದೆ ಹಮ್ಯಾನ ಬಾಯಿಯಿಂದ ಶಬ್ದ ಹೊರಬೀಳಲಿಲ್ಲ. ಮಾಧವ ಶ್ರೀಧರನನ್ನು ನೋಡಿದ. ಶ್ರೀಧರ ಎಂದಿನಂತೆ ಸ್ತಬ್ಧ. ಮಾಧವನಿಗೆ ತಡೆಯದಂತಾಯ್ತು. “ ಯಾಕರ್‍ಯೋ! ದಿನಾಲು ಕರ-ಟಕ–ದಮನಕರ ಹಾಂಗ ರಾಜಕಾರಣದ ಕತೆಗಳನೆ ಹೇಳತಿದ್ದಿರಿ, ಈಗ ಒಂದು ಮಾತಾಡಿದರ ಅದಕ್ಕ ಉತ್ತರ ಇಲ್ಲಲ್ಲ ! ” ಎಂದ.

ಹಮ್ಯಾನೆ ಹಲ್ಲು ಕಿರಿದ; ‘ ನೀನು ಸ್ಕಾಲರ್ ಅಪ ! ನಮ್ಮಂಥವರ ಬಾಯಿ ಕಟ್ಟೋವಂಥಾ ಪ್ರಶ್ನೆ ಕೇಳತೀ. ’

‘ ನಿನ್ನ ಬಾಯಿ ಕಟ್ಟೋದ ! ನಮ್ಮ ಎಲ್ಲಾರಕಿಂತ ಮುಂದಾಗಿ ವರ್ತಮಾನಪತ್ರ ಓದತಿದ್ದಿ. ನಾನು ಕೇಳಿದ ಮಾತು ತಿಳೀಲಿಲ್ಲ ನಿನಗ ? ’

‘ ನನಗ ತಿಳಿದಿದೆ. ಆದರೆ ನನ್ನಂಥವನಿಗೆ ಎಂಥಾ ಪ್ರಶ್ನೆ ಕೇಳ್ಬೇ ಕಂಬೋದು ನಿನಗ ತಿಳಿದಿಲ್ಲ. ಕಾಲೇಜದೊಳಗ ಕಲೀಬೇಕು ಅಂತ ನನಗ ಎಂದಾದರೂ ಹಟ ಇದ್ದೀತ ? ಕಾಲೇಜ ಹಿಡಿದವರಿಗೆ, ಕಾಲೇಜ ಬಿಡೋ ಪ್ರಶ್ನೆ. ನನ್ನಂಥವನಿಗೆ—’

‘ ಅಂದ್ರೆ ನೀನು ಕಾಲೇಜ ಬಿಡುವವ ಅಹುದಲ್ಲೊ ? ’ ಎಂದು ಆತುರ ದಿಂದ ಕೇಳಿದ ಮಾಧವ.

'ನನ್ನಂಥವ ಹಿಡಿದರೇನು ಬಿಟ್ಟರೇನು ?' ಎಂದು ಮಾತನ್ನು ಹಾರಿಸಿಕೊಳ್ಳಲು ಯತ್ನಿಸಿದ ಹಮ್ಯಾ.

'ಬಿಡ್ತೀನಿ ಅಂತ ಒಂದು ಮಾತಿನಾಗ ಹೇಳ್ಬಾರ್ದೆ ?'

'ಹಮ್ಯಾ ಕಾಲೇಜ ಬಿಡೋದಿಲ್ಲ.'

ಈ ವಾಕ್ಯ ಅನಂತನ ಬಾಯಿಯಿಂದ ಬಂದಿತು. ಹೀಗೆ ಬಂದೀತೆಂಬುದನ್ನು ನಿರೀಕ್ಷಿಸದಿದ್ದ ಮಾಧವನು ಒಂದು ನಿಮಿಷ ಅವಾಕ್ಕಾದನು.

'ಹಮ್ಯಾ ಬಿಡೋದಿಲ್ಲ?....ಅಂದ್ರೆ—ನೀನೂ ಅವನೂ—'

'ನಾನಂತೂ ಬಿಡೋದೇ ಇಲ್ಲೊ, ಮಾಧೂ! ಹಮ್ಯಾನೂ ಬಿಡೋದಿಲ್ಲ ಅಂದೆ' ಎಂದು ಅನಂತನು ತುಸು ರಭಸದಿಂದಲೆ ನುಡಿದನು. ನಮಗೆ ಪ್ರಶ್ನೆ ಕೇಳುವ ಅಧಿಕಾರ ಇವನಿಗೆ ಯಾಕೆ, ಪ್ರಶ್ನೆ ಕೇಳಿ ನಮ್ಮನ್ನು 'ಖೊಟ್ಟಿ' ಮಾಡುವ ದುಷ್ಕೃತನ ಯಾಕೆ ಎಂದು ಅನಂತನ ರಭಸ. ಇಂದಿನವರೆಗೆ ಸಮರಸನಾಗಿದ್ದ ಗೆಳೆಯನು ಈ ರೀತಿ ಕೈ ಬಿಡುವುದೆ?—ಎಂದು ಮಾಧವನಿಗೂ ಆವೇಶ ಬಂದಿತು. ಮಾಧವನ ಮುಖಮುದ್ರೆಯಲ್ಲಿಯ ಆ ಆವೇಶವನ್ನು ಹಮ್ಯಾನು ಕಂಡನು. ಮಾಧವನು ಏನಾದರೂ ಸಿಟ್ಟಿನಿಂದ ನುಡಿಯಬಹುದೆಂಬ ಹೆದರಿಕೆಯಿಂದ ನಡುವೆಯೆ ಮಾತನಾಡಿದನು:—

'ಮಾಧೂ, ಸಿಟ್ಟಿಗೇಳಬ್ಯಾಡ. ನಾವು ಕಾಲೇಜ ಬಿಡೋದಿಲ್ಲ ಅಂದ್ರೆ ಏನಂತ ತಿಳಿದೀದಿ? ಸಂನ್ಯಾಸಿ ಹೆಂಡತೀನ್ನ ಬಿಡೋದಿಲ್ಲ ಅಂದಹಾಂಗ. ಅನಂತ ಇಂಗ್ಲಂಡಕ ಹೊರಟು ನಿಂತಾನ. ನೀನು ಕಾಲೇಜದೊಳಗ ಉಳಿ ಅಂದ್ರೂ ಅವ ಉಳಿಯೋದಿಲ್ಲ. ಇನ್ನು-ನನ್ನ ಮಾತು. ಗಾಂಧಿಕಿಂತ ಮುಂಚೇ ನನಗ್ಗೊತ್ತಾಗಿದೆ ಕಾಲೇಜ ಶಿಕ್ಷಣ ನಿರುಪಯೋಗಿ ಅಂತ. ಆದ್ರೆ—ಕಾಲೇಜ ಇವತ್ತು ಬಿಟ್ಟೆ ಅಂತ ಹೇಳಿದೆನೆಂದರೆ ನಾಳೆ ಮುಂಬಯಿ ಬಿಟ್ಟು ಬಾ ಅಂತ ಪತ್ರ ಬರೀತಾನ ನಮ್ಮಪ್ಪ....ಆಂ?....ಹಹ! ಹೌದಂತೀ ಇಲ್ಲೋ?'

'ಹೌದನ್ನೋದಿದ್ರ ಅದರೊಳಗೆ ಮುಳುಗಿಸುತ್ತಿದ್ದೆ ನಿನ್ನ' ಎಂದ ಮಾಧವ.

ಆಗ ಮಾಧವನಿಗೆ ತಿಳಿಯಿತು ಇನ್ನು ಇವರಿಬ್ಬರ ಜೊತೆ ತನಗೆ ತಪ್ಪಿತು ಅಂತ. ಗೆಳೆತನದಲ್ಲಿ ಹೀಗೆ ಚ್ಯುತಿ ಬಂದುದರ ತಪ್ಪು ತನ್ನದಲ್ಲ ಅಂತ ಅರಿತಿದ್ದರೂ ಮಾಧವನಿಗೆ ಅಸಮಾಧಾನವಾಯಿತು, ಹಳಹಳಿಯಾಯಿತು.

ಅಂತೂ ಆನಂದವಾಗಬೇಕಾದ ಸಮಯದಲ್ಲಿ ಅನುತ್ಸಾಹವಾಯಿತು. ಅದಕಾಗಿ, ಶ್ರೀಧರನ ಮಾತಿನ ಹಟವನ್ನು ನೋಡಿ ಮಾಧವನಿಗೂ ಹಟ ಹಿಡಿಯಿತು. "ದೇಶದ ಮ್ಯಾಲೆ ಜವಾಬ್ದಾರಿ ಹೊರಿಸೋದು ಸುಲಭ" ಎಂದ ಮಾಧವ. "ನಮ್ಮ ಹೇಡಿತನ ಒಪ್ಪಿಕೊಳ್ಳೋಲಾರದಕ್ಕ ದೇಶ ನಮ್ಮನ್ನು ಹೀಂಗ ಮಾಡಿತು ಅನ್ನೋದು. ನಾವು ಒಂದಾದರೆ ಯಾರು ನಮ್ಮನ್ನ ದುರ್ಬಲ ಮಾಡೋರು ?"

ಶ್ರೀಧರನು ನಕ್ಕನು.

ಮಾಧವನು ಕೆರಳಿದನು. "ಒಂದಾಗೋದು ಅಶಕ್ಯ ಅಂತ ನೀ ವಾದಿಸುವವ–' ಶ್ರೀಧರನು ತಲೆ ಜಾಡಿಸಲು–'ನೀ ವಾದಿಸತಿದ್ದಿ–ನನಗೆ ಗೊತ್ತು. ಆದರೆ ತಮ್ಮ ದುರ್ದೈವದಿಂದ ಬ್ರಿಟಿಶರು ಅದೊಂದು ತಪ್ಪು ಮಾಡಿದರು. ಆಳೋದು ಸುಲಭ ಆಗಲಿ ಅಂತ ನಮ್ಮನ್ನು ಒಂದು ಮಾಡಿದರು.'

'ಮೊನ್ನೆ ಅನಂತ ಏನಂದ ನೆನಪಿದೆ ಏನು ?' ಎಂದ ಶ್ರೀಧರ.

ಮಾಧವನಿಗೆ ಈ ಪ್ರಶ್ನೆ ಅಪ್ರಸ್ತುತ ಎನ್ನಿಸಿತು, ಆದರೂ 'ಅನಂತನ ಹೆಸರೇ ಬ್ಯಾಡ ಈ ವಾದದೊಳಗ' ಎಂದ.

ಶ್ರೀಧರನು ಮಾತ್ರ ಈಗ ಹಟದಿಂದ ಮಾತನಾಡಿದ. 'ಅನಂತನ ಹೆಸರು ಬೇಡ. ಆದ್ರೆ ಆ ಹೊತ್ತು ಅನಂತ ಅಂದದ್ದು ನಮ್ಮ ದೇಶದ ಸತ್ಯ ಅನುಭವ. "ನಾವು ಅಂದ್ರ ಯಾರು ? ಅಂತ ಕೇಳಿದ ಅನಂತ."

'ಅನಂತಗ ಬುದ್ಧಿಯಿಲ್ಲ.'

'ಆದರೆ ನಮ್ಮ ದೇಶದಲ್ಲಿ ಬುದ್ಧಿ ಇಲ್ಲದವರೇ ಅನಂತರಾಗಿದ್ದಾರಲ್ಲ ?'

'ಬುದ್ಧಿ ಇಲ್ಲದವರಿಗೆ ತಿಳಿಯೋದಿಲ್ಲ ಅಂತ ಇದ್ದ ಮಾತು ಸುಳ್ಳಾಗೋದಿಲ್ಲ. ಬ್ರಿಟಿಶರ ಆಳಿಕೆಗಾಗಿ ದೇಶ ಒಂದು ಆದದ್ದು ಸುಳ್ಳಲ್ಲ.'

'ಮಾಧೂ, ಬ್ರಿಟಿಶರ ದೃಷ್ಟಿಯಿಂದ ದೇಶ ಒಂದು, ಸುಳ್ಳಲ್ಲ. ಆದರೆ ನಮ್ಮ ದೃಷ್ಟಿಯಿಂದ ಒಂದಾಗಿದೆ ಏನು ? ಪೋಲೀಸ ಡಿಪಾರ್ಟಮೆಂಟಿಗಾಗಿ ದೇಶ ಒಂದಾಗಿದೆ, ಪರಸ್ಪರ ಪ್ರೇಮದಿಂದ ಒಂದಾಗಿದೆ ಏನು ? ಅದಕೇ ಹೇಳ್ತೀನಿ, ನಮ್ಮ ದೇಶ ಮಾಡಿಧಾಂಗ ನಾವು ಇದ್ದೀವಿ. ಅಭಿಮಾನ ಇಲ್ಲ ನಮಗ ದೇಶದ್ದು.'

ಮಾಧವನಿಗೆ ಸಿಟ್ಟು ಬಂದಿತು. ಚಿಕ್ಕವನಿಂದ ಬುದ್ಧಿ ಕಲಿಯುವ ಪ್ರಸಂಗ!

'ಹುಚ್ಚು! ಯಾವನೋ ತಲೆತಿರುಕ ಬರೆದದ್ದನ್ನ ಪಾಠ ಮಾಡಿ ಹೇಳ್ತಿ ನೀನು, ಶ್ರೀಧರಾ. ಸುಮ್ಮ ಸುಮ್ಮನೆ ದೇಶ–ದೇಶ ಅಂದ್ರೇನು ? ನೆಲಕ್ಕ ಬುದ್ಧಿ ಇದೆ ಅಂತ ವಾದಿಸುವವ ನೀನು'

"ದೇಶ ಅಂದ್ರ ನೆಲ ಅಲ್ಲ. ದೇಶ ಅಂಬೋದು ಒಂದು ಸಂಪ್ರದಾಯ' ಒಂದು ಭಾವನಾ."

. . . .

ಶ್ರೀಧರನ ಮಾತು ಸುಳ್ಳಲ್ಲ. ಭಾವನಾ ಮಾಡಿಸಿಧಾಂಗ ನಾವು ಇರ್ತೀವಿ. ಕುರ್ಚಿಯಲ್ಲಿ ಕುಳಿತಲ್ಲಿಯೆ ನಸುನಗೆ ಮೂಡಿತು ಮಾಧವನ ಮುಖ ದಲ್ಲಿ. ಎಂದಿನ ಮಾತು! ಇಂದು ಸ್ಮರಣೆಗೆ ಬರುವುದು, ಇಷ್ಟೇ ಅಲ್ಲ–ಇಂದು ಸತ್ಯವಾಗಿ ಪರಿಣಮಿಸುತ್ತಲಿದೆ. ಭಾವನೆ—ದೇಶ ಅನ್ನೋದು ಒಂದು ಭಾವನೆ ಎಂತಲೇ ಇಂದು ಸ್ವಾತಂತ್ರ್ಯ ಸಿಕ್ಕರೂ ಸಮಾಧಾನವಿಲ್ಲ. ಯಾಕೆಂದರೆ ಭಾವ ನೆಗೆ ಧಕ್ಕೆ ತಗುಲಿದೆ; ವಿಚ್ಛೇದದ ಆಘಾತವಾಗಿದೆ. ನಿಜ. ಶ್ರೀಧರನ ಈ ಬುದ್ಧಿವಂತಿಕೆ ಇಂದು ಮಾಧವನ ತಲೆಯನ್ನು ತೂಗಿಸಿತು. ದೇಹ ದುರ್ಬಲ ವಾದುದಕ್ಕೆ ಮಾಧವನ ಕಂಠ ತುಂಬಿ ಕಣ್ಣು ನೀರು ಕಟ್ಟಿದುವು. ಶ್ರೀಧರನು ಈ ದಿನ ಬರುವವನಿದ್ದಾನೆ. ಇದು ಸ್ವಾತಂತ್ರ್ಯದ ದಿನ. ಇಂದು ನಾಲ್ವರೂ ಗೆಳೆಯರು ಭೆಟ್ಟಿಯಾಗುವವರಿದ್ದಾರೆ. ಅಷ್ಟಕ್ಕಾಗಿಯಾದರೂ ತಾನಿಂದು ಜೀವದಿಂದಿದ್ದುದು ಭಾಗ್ಯ ಎಂದುಕೊಂಡ ಮಾಧವ. ಸ್ವಾತಂತ್ರ್ಯದ ಸುಖ ತನಗೇನು? ತಾನು ಮರಣೋನ್ಮುಖನಾಗಿದ್ದಾನೆ. ಆದರೆ ಹಿಂದಿನ ಗೆಳೆಯರನ್ನು ಈ ವಾತಾವರಣದಲ್ಲಿ ಕೂಡಿಕೊಳ್ಳುವುದು ಮಾತ್ರ ಸ್ವರ್ಗ ಸುಖ ಎನ್ನಿಸಿತ್ತು ಮಾಧವನಿಗೆ, ಗೆಳೆತನವಾದರೂ ಎಂತಹದು! ರಾಮಾಯಣದ ಆಂಜನೇಯ ನಂತೆ ಎಲ್ಲ ಆತಂಕಗಳನ್ನು ದಾಟಿ ಇಪ್ಪತ್ತೇಳು ವರುಷಗಳ ನಂತರ ಆತ್ಮ ಶೋಧದ ಗುರಿಯನ್ನು ಮುಟ್ಟುತ್ತಲಿದೆ. ಮಾಧವನಿಗೆ ಈಗ ತುಸು ಸಮಾ ಧಾನವಾಯಿತು, ಮನಸ್ಸಿಗೆ ಹಗುರೆನ್ನಿಸಿತು. ಇಂತಹ ಗೆಳೆತನವಿದೆಯಂತೆ ಇಂದು ಕೂಡ ಮಾಧವನ ಮನಸ್ಸು ಹಿಂದಿನದನ್ನೆ ನೆನೆದುಕೊಳ್ಳುತ್ತಿದೆ.

ಆ ಶ್ರೀಧರ! ಆ ಅನಂತ! ಆ ಹಮ್ಮು! ಈಗ ಅವರ ಹೆಸರು ಕೂಡ ಬದಲಾಯಿಸಿದೆ. ಶ್ರೀಧರನು ಕಾಮ್ರೇಡನಾಗಿದ್ದಾನೆ, ಅನಂತನು I C S. ಆಗಿದ್ದಾನೆ, ಹಮ್ಮು 'ಹಾನರೇಬಲ್' ಆಗಿದ್ದಾನೆ. ಆದರೆ ಮಾಧವ? ಮಾಧವನು ಏನಾಗಿದ್ದಾನೆ? ಏನಾಗಬೇಕೆಂದಿದ್ದ? ಮಾಧವನ ಆಶೆ ಆಕಾಂಕ್ಷೆಗಳೆಲ್ಲಿವೆ? ಅನಂತನನ್ನು ಧಿಕ್ಕರಿಸಿದ, ಹಮ್ಮೂನನ್ನು ಹಂಗಿಸಿದ, ಶ್ರೀಧರನ ನಯಬುದ್ಧಿಗೆ ನಕ್ಕ ಮಾಧವನು ಎಲ್ಲಿದ್ದಾನೆ?

. . . . .

ಮಾಧವನು ಊರೂರನ್ನು ಅಲೆಯುತ್ತಿದ್ದಾನೆ. ಕಾಲೇಜನ್ನು ಬಿಟ್ಟೊಡನೆ ಶ್ರೀಧರನು ಮನೆಗೆ ಮರಳಿ ಮನೆಯಲ್ಲಿಯೆ ಉಳಿದುಕೊಂಡನು. ಅವನ ಹೆಸರನ್ನು ಕೂಡ ಎಷ್ಟೋ ದಿವಸ ಕೇಳಿರಲಿಲ್ಲ ಮಾಧವ. ಅನಂತನು ಟರ್ಮಿನಲ್ ಪಾಸಾದನಂತೆ, ಇಂಗ್ಲಂಡಿಗೆ ಹೋದನಂತೆ; ಮುಂದೆ ಅವನ ಕಾಗದವೇನೊ ಬಂದಿತು. ಆದರೆ ಉತ್ತರ ಬರೆಯುವ ಅನುಕೂಲವಿದ್ದಿರಲಿಲ್ಲ ಮಾಧವನಿಗೆ. ಮಾಧವನು ಊರಿಗೆ ಬಂದಾಗ ಅವನ ಮದುವೆ ಗೊತ್ತಾಗಿತ್ತು. ತಾನು ಕಾಲೇಜನ್ನು ಬಿಟ್ಟು ಬರುವೆನೆಂದು ತಂದೆಗೆ ತಿಳುಹಿಸಿರಲಿಲ್ಲ. ಮದುವೆಯ ಆತುರದಿಂದಲೆ ಮಗನು ಬಂದನೆಂದು ತಂದೆಗೆ ಸಂತೋಷವಾಯ್ತು. ಆ ಪರಿಸ್ಥಿತಿಯಲ್ಲಿ ನಿಜವನ್ನು ತಂದೆಗೆ ಹೇಳುವ ಧೈರ್ಯವಾಗಲಿಲ್ಲ ಮಾಧವನಿಗೆ. ಅಂತೂ ಮದುವೆಯಾಯಿತು. ಕೂಡಲೆ ಅಕ್ಟೋಬರದ ರಜೆಗೆ ಪ್ರಾರಂಭವಾಯಿತು. ಮಾಧವನಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಅಷ್ಟರಲ್ಲಿ ಹಮ್ಮೂ ಬಂದನು ಮಾಧವನ ಊರಿಗೆ. ಹಮ್ಮೂನ ಊರಾದರೂ ಹತ್ತಿರದಲ್ಲಿಯೆ. ಮಾಧವನು ಗೆಳೆಯರೊಡನೆ ಹೋಗುವ ನೆವದಿಂದ ಹಮ್ಮೂನ ಕಡೆ ಬಂದನು. ಆ ದಿನ ರಾತ್ರಿ ಇಬ್ಬರೂ ಗೆಳೆಯರು ಏಕಾಂತ ಹರಟೆಗೆ ಅನುವಾದರು.

"ನಾನೂ ಬಿಟ್ಟೇ ಬಂದೆ" ಎಂದ ಹಮ್ಮೂ.

"ಮನೆಯೊಳಗೆ ಹೇಳಿದಿಯಾ?" ಮಾಧವನು ತನ್ನ ಸಮಸ್ಯೆಗೆ ಉತ್ತರವನ್ನು ಹುಡುಕುವ ಹವಣಿಕೆಯಿಂದಲೆ ಕೇಳಿದನು.

"ನೋಡು! ಬಿಟ್ಟು ಬಂದೆ ಅಂದ್ರೆ ಭಲೆ ಅನ್ನಬೇಕೋ ಏನು ಇಲ್ಲದ ಭೂತ ಕೆಣಕಬೇಕೊ?"

" ಅಲ್ಲೊ, ನಾಳೆ ನವೆಂಬರಕ್ಕ ನೀನು ತಿರುಗಿ ಕಾಲೇಜಕ್ಕ ಹೋಗ್ದಿದ್ದರೆ ಕೇಳೋರಲ್ಲ ನಿನ್ನ ತಂದೆ? ಆಗ ಏನು ಮಾಡುವೆ ಅಂತ ಕೇಳ್ದೆ."

" ನನಗೇನು ಕೇಳ್ತಾರ? ಎರಡನೇ ವರ್ಷ, ಟರ್ಮ್ ತುಂಬೋ ಕಾಳಜಿ ಇಲ್ಲ; ಅಲ್ಲಿ ಈ ಚಳವಳದ ತ್ರಾಸ ಆಗ್ತದ, ಅದಕ ಊರೊಳಗ ಇದ್ಕೊಂಡೇ ಅಭ್ಯಾಸ ಮಾಡ್ತೇನಿ ಅಂತ ಹೇಳಿದರಾತು."

" ಅಭ್ಯಾಸ ಆದ್ರೂ ಮಾಡುವವ ಅನ್ನು ಹಾಗಾದರೆ."

" ಅಭ್ಯಾಸ ಮಾಡಿದೆ ಅಂತ ತಿಳಿ."

" ಪರೀಕ್ಷಾಕ್ಕೂ ಕೂಡುವವ."

" ಪರೀಕ್ಷಾಕ್ಕೂ ಕೂತೆ ಅಂತ ತಿಳಿ."

" ಅಂದರೆ ಕಾಲೇಜ ಬಿಟ್ಟ್ಹಾಂಗ ಏನಾತು?" ನಿರಾಶೆಯ ದನಿಯಲ್ಲಿ ನುಡಿದ ಮಾಧವ.

" ಪರೀಕ್ಷಾಕ್ಕ ಕೂಡಲಿ ಬಿಡಲಿ. ಮುಂಬಯಿಗೆ ಹೋಗುವದನ್ನ ನಾನು ತಪ್ಪಿಸಿಕೊಳ್ಳೋದಿಲ್ಲ."

ಮಾಧವನಿಗೆ ಕೆಲಹೊತ್ತು ಏನೂ ಮಾತನಾಡದಂತಾಯಿತು. ಕೊನೆಗೆ,

" ನಾನೂ ತಂದೆಯವರಿಗೆ ಹೇಳಿಲ್ಲ"—ಬೇರೆ ಕಡೆ ನೋಡುತ್ತ " ನನ್ನ ಮದುವೇನೂ ಆಯ್ತು" ಎಂದ.

" ಓಹೊ! Congratulations! ಗಾಂಧಿ ಅಪ್ಪ ಬಂಧಾಂಗ ಆಯ್ತು ಬಿಡು!" ಮಾಧವನು ಹುಚ್ಚನಂತೆ ತನ್ನನ್ನು ನೋಡಲು " ಕಾಲೇಜ ಬಿಡಿಸಲಿಕ್ಕೆ ಗಾಂಧೀಗಿಂತ ಗೃಹಣೀಗೆ ಶಕ್ಯ, ಅದಕ್ಹೇಳಿದೆ."

ಈ ಮಾತಿನಿಂದ ಮಾಧವನ ಮನಸ್ಸಿಗೆ ಬಲವಾದ ಪೆಟ್ಟು ಕುಳಿತಂತಾಯಿತು. ಒಂದೇ ತಿಂಗಳ ಮುಂಚೆ ಇಂತಹ ಮನೋವೃತ್ತಿಗಾಗಿ ತಾನು ತಿರಸ್ಕಾರ ತೋರಿಸಿದ್ದೂ ಸ್ಮರಣೆಗೆ ಬಂದಿತು. ತನಗಾಗಿ ತಡೆಯದಷ್ಟು ನಾಚಿಕೆಯಾಯಿತು.

" ನನಗ ಗೃಹಾನೂ ಬ್ಯಾಡ, ಗೃಹಿಣೀನೂ ಬ್ಯಾಡ" ಎಂದು ಆರ್ಭಟಿಯಿಂದ ನುಡಿದ.

. . . . .

೮

. . . . .

ಮಾಧವನ ಮುಖ ಒಳನಗೆಯಿಂದ ತುಂಬಿ ಅರಳಿತು. ಜೀವನದ ಮೋಜು ಮಾಧವನ ಮನಸ್ಸನ್ನು ಚನ್ನಾಗಿ ಬಿಂಬಿಸಿತು. ಮನೆಬೇಡ–ಮಡದಿ ಬೇಡ ಎಂದು ಅಬ್ಬರಿಸಿದ್ದ ಮಾಧವನು ಇಂದು ಮೆರವಣಿಗೆಯಲ್ಲಿ ಮಗನ ಮುಖವನ್ನು ನೋಡುವ ಆಸೆಯಿಂದ ಜೀವನಕ್ಕೆ ಜೋತು ಬಿದ್ದಂತೆ ಕುಳಿತಿದ್ದಾನೆ! ಹೆಂಗಸರ ಹೃದಯ ಹುವ್ವಿನಂತಹದು; ಅದು ಒಡೆಯದಂತೆ ನೋಡುವುದು ಆಶಾತಂತುವು ಎಂದು ಹೇಳಿದ ಕಾಳಿದಾಸನು ಅನುಭವವಿಲ್ಲದ ಕೇವಲ ಕಲ್ಪನಾಶಕ್ತಿಯ ಕವಿಯಾಗಿರಬಹುದು, ಇಲ್ಲವೆ ಬಾಯಿಗೆ ಬಂದುದನ್ನು ಬರೆಯುವ ಅಲಕ್ಷ್ಯವೃತ್ತಿಯವನಾಗಿರಬಹುದು. ಆಶಾತಂತುವು ಹೆಂಗಸರಿಗೆ ಮಾತ್ರವಲ್ಲ, ಇಡಿಯ ಮನುಷ್ಯಪ್ರಾಣಿಗಿರುವುದು; ಇಷ್ಟೇಕೆ, ಮಿಕ್ಕ ಪ್ರಾಣಿಮಾತ್ರಗಳಿಗೂ ಇರುವುದು. ಗಿಡ–ಬಳ್ಳಿಗಳಿಗೆ ಕೂಡ ಇರಬಹುದೇನೊ? ಕತ್ತರಿಯಿಂದ ಕತ್ತರಿಸಿದಲ್ಲಿ ಕೂಡಲೆ ರಸದಿಂದ ತುಂಬಿಕೊಳ್ಳುವ ಬಳ್ಳಿಗೆ ತಾನಿನ್ನೂ ಬದುಕುವೆನೆಂಬ ಆಶಾತಂತು ಇದೆಯಲ್ಲವೆ? ಜೀವನದ ಮೋಜು! ಇಪ್ಪತ್ತೇಳು ವರುಷಗಳ ವರೆಗೆ ಒಂದರ ಹಿಂದೊಂದು ಯಾತನೆಯನ್ನೆ ಅನುಭವಿಸಿದಾಗಲೂ ಕೊನೆಗೆ ಸುಖವಿದೆ ಎನ್ನುವುದು, ಮೆರವಣಿಗೆಯಲ್ಲಿ ಮಗನ ಮುಖವನ್ನು ನೋಡುವುದೆ ಆ ಸುಖ ಎಂದು ತಿಳಿಯುವುದು, ಅದಕಾಗಿ ಬಾಳುವುದು! ಎಂತಹ ಆಶಾತಂತು ಇದು! ಬುದ್ಧಿಯಿಂದ ವಿಚಾರಮಾಡಬಲ್ಲ ಮನುಷ್ಯಪ್ರಾಣಿಯು ಕೂಡ ಈ ತಂತುವಿನಿಂದ ಬಿಗಿಯಲ್ಪಟ್ಟಿದ್ದಾನೆ! ಮಾಧವನಿಗೆ ಕುಳಿತಲ್ಲಿಯೆ ಸಮಾಧಾನವೆನ್ನಿಸಿತು. ಜೀವನದಲ್ಲಿ ಒಂದು ಕೊರತೆ ಈ ವಿಚಾರದಿಂದ ತುಂಬಿಕೊಂಡಂತೆನ್ನಿಸಿತು. ಮಗನ ಮುಖ! ಅದೊಂದು ಮಾತಿನಿಂದ ಹಿಂದಿನ ನೆನಪು ಹಿಂದೊತ್ತಿ ಮುಂದಿನದಕ್ಕಾಗಿ ಆಸೆ ತಲೆ ಎತ್ತುವುದು. ಅಲ್ಲವೆ? ಬೆಳಗಿನಿಂದಲೂ ಒಂದೇಸವನೆ ಹಿಂದಿನ ನೆನಪು ಬೇಡೆಂದರೂ ಮನಸ್ಸಿನಲ್ಲಿ ಮುನ್ನುಗ್ಗುತ್ತಿದೆ. ಅಥವಾ—ಆ ನೆನಪನ್ನು ಬದಿಗೊತ್ತುವ ಬಲ ತನ್ನ ಮನಸ್ಸಿಗಿಲ್ಲ. ದೇಹ, ಮನಸ್ಸು ಎರಡೂ ಸಮೆದು ಹಣ್ಣಾಗಿವೆ. ಶ್ರೀಧರನು ಹೇಳಿದಂತೆ ದೇಶವೆ ನನ್ನನ್ನು ಈ ರೀತಿ ದುರ್ಬಲನನ್ನಾಗಿ ಮಾಡಿರಬಹುದೆ—ಎಂದು ಮಾಧವನಿಗೆ ಮತ್ತೆ ಸಂದೇಹ ಬಂದಿತು.

ಆದರೆ ಹಾಗಾಗುವುದು ಶಕ್ಯವಿಲ್ಲ. ದೇಶಕ್ಕಾಗಿ ತನಗಿದ್ದ ಉತ್ಸಾಹ, ಹುಮ್ಮಸ್ಸ ಇವುಗಳನ್ನು ನೆನೆದುಕೊಂಡರೆ ಹಾಗಾಗುವುದು ಶಕ್ಯವೆ ಇದ್ದಿರಲಿಲ್ಲ.

. . . .

ನಾನು ಬಲಿಷ್ಠನಾಗುವ ಯೋಗ್ಯತೆ ನನ್ನಲ್ಲಿಯೆ ಇದೆ ಎಂದುಕೊಂಡ ಮಾಧವ. ಹಮ್ಮೋನೊಡನೆ ಮಾತನಾಡಿದಂತೆ ತನ್ನ ವ್ಯಕ್ತಿತ್ವವೆ ಬದಲಾಗುವುದೆಂದೆನ್ನಿಸಿತು ಅವನಿಗೆ. 'ಗೃಹಾನೂ ಬೇಡ, ಗೃಹಿಣಿಯೂ ಬೇಡ' ಎಂಬ ವಿಚಾರವಾಗಲಿ ಮಾತಾಗಲಿ ಇದುವರೆಗೆ ತನಗೆ ಹೊಳೆದಿರಲಿಲ್ಲ, ಅದಕಾಗಿಯೆ ತಾನು ತಂದೆಯ ಮುಂದೆ ಆ ಮಾತನ್ನೆತ್ತಿಲ್ಲ ಎಂಬ ಸಮಾಧಾನವನ್ನು ತಂದುಕೊಂಡನು. ತಿರುಗಿ ಮನೆಗೆ ಹೋಗಬಾರದು, ಅಲ್ಲಿಂದಲೆ ಕಾಗದ ಬರೆದು ತಂದೆಗೆ ತಿಳುಹಿಸಿ ಮುಂದಿನ ಕೆಲಸಕ್ಕೆ ಸಜ್ಜಾಗಬೇಕು ಎಂದುಕೊಂಡ. ತಂದೆಯನ್ನು ಎದುರಿಸಲು ಇನ್ನೂ ತನಗೆ ಧೈರ್ಯವಿದ್ದಿರಲಿಲ್ಲ ಎಂಬ ಮಾತು ಹೊಳೆಯಲಿಲ್ಲವೊ, ಒಪ್ಪಿಗೆಯಾಗಲಿಲ್ಲವೊ, ಮುಚ್ಚುವ ಹವಣಿಕೆಯೊ ಎಂಬುವರ ಬಗ್ಗೆ ಅವನು ವಿಚಾರವನ್ನೆ ಮಾಡಲಿಲ್ಲ. ಅದೇ ಕಲಕತ್ತೆಯ ಕಾಂಗ್ರೆಸ ಅಧಿವೇಶನ ಮುಗಿದು ಆಯಾ ಮುಂದಾಳುಗಳು ತಂತಮ್ಮ ಸ್ಥಳಗಳಿಗೆ ಮರಳಿದ್ದರು. ಕೂಡಲೆ ಕಾಂಗ್ರೆಸದ ಸಂದೇಶವನ್ನು ಇಡಿಯ ದೇಶದ ಜನತೆಗೆ ತಿಳುಹಿಸಬೇಕೆಂಬ ಯೋಜನೆಯಾಯಿತು. ಮಾಧವನು ಉತ್ಸಾಹಸಾಗರದಲ್ಲಿ ತೇಲಾಡಿದನು. ಎಂತಹ ಚಳವಳ! ಮುವ್ವತ್ತುಕೋಟಿ ಜನರಲ್ಲಿ ಪ್ರತಿಯೊಬ್ಬನಿಗೆ ಸಂದೇಶವನ್ನು ಮುಟ್ಟಿಸುವ ಯೋಜನೆಯ ಮೂಲಪುರುಷನು ನಿಜವಾಗಿಯೆ ಮಹಾತ್ಮನು! ತಂದೆ–ಮನೆ–ಮಡದಿ ಎಲ್ಲವನ್ನೂ ಮರೆತು ಮಾಧವನು ಚಳವಳದಲ್ಲಿ ಧುಮಿಕಿದನು. ಹಸಿವೆ–ನೀರಡಿಕೆಗಳ ಪರಿವೆ ಇಲ್ಲದೆ ಊರೂರನ್ನು ಅಲೆದಾಡಿದನು. ಪ್ರತಿಯೊಂದು ಕಡೆ ಸಭೆ. ಸಾವಿರಾರು ಜನರು ಸೇರುವರು. ಎಲ್ಲಿ ನೋಡಿದಲ್ಲಿ ಉತ್ಸಾಹ. ಅಡ್ಡಮಳೆಯ ಆಣೆಕಲ್ಲಿನಂತೆ ಸಭೆಯ ಪ್ರೇಕ್ಷಕರ ವಿದೇಶಿ ಬಟ್ಟೆಗಳು ಪಟಪಟ ಗುಂಪುಗುಂಪಾಗಿ ಬೀಳುತ್ತಿದ್ದವು. ಶತ್ರುವಿನ ಶವದ ಮೇಲೆ ಕಾಲೂರಿ ನಿಂತ ವೀರನಂತೆ ಆ ಬಟ್ಟೆಗಳ ರಾಶಿಯ ಮೇಲೆ ನಿಂತು ಉಪನ್ಯಾಸವನ್ನು ಕೊಡುವುದು. ಉಪನ್ಯಾಸವಲ್ಲವದು, ವೀರಸಂದೇಶ! ಭಾರತದಲ್ಲಿ ವೀರರಿದ್ದಿಲ್ಲವೆ? ವೀರರ ಮಕ್ಕಳಾದ ನಾವೂ ವೀರರಲ್ಲವೆ? ೩೦ ಕೋಟಿ ಜನರನ್ನು ೩೦ ಸಾವಿರ ಬಿಳಿಯರು

ಆಳುವುದೆಂದರೆ ಎಂತಹ ಹೇಯ ಅವಮಾನ! ಯಾಕಿದೆ ಈ ಸ್ಥಿತಿ? ನಮ್ಮ-ದರ ಅರಿವು ನಮಗಿಲ್ಲ, ನಮ್ಮ ಶಕ್ತಿಯ ಆಳ ನಮಗೆ ಗೊತ್ತಿಲ್ಲ. ಇಂದು ನಾವು ಒಂದಾಗಿ ಏಕಕಾಲಕ್ಕೆ ಅಸಹಕಾರವನ್ನು ಹೂಡಿದರೆ ಉಳಿದೀತೆ ಬ್ರಿಟಿಶರ ರಾಜ್ಯ ? ಸಾಹೇಬರಿಗೆ ಸ್ವಂತದ ಗಂಟು ಕಟ್ಟಲು ಕೂಡ ಸಮಯ ದೊರೆಯಲಿಕ್ಕಿಲ್ಲ ಓಡಿಹೋಗುವಾಗ ( ನಗೆ). ಇಂದು ನಾವು ಒಂದಾಗೋಣ (ಚಪ್ಪಾಳೆ). ಮಹಾತ್ಮಾ ಗಾಂಧಿ (ಬೋಲೋ ಮಹಾತ್ಮಾ ಗಾಂಧೀಕಿ ಜೈ ) —ಮಹಾತ್ಮಾಗಾ—( ಬೋಲೋ ಭಾರತಮಾತಾಕೀ ಜೈ)—ಮಹಾತ್ಮಾ—( ಅಲ್ಲಾ ಹೋ ಅಕ್ಬರ)—ನಮ್ಮ ಮುಂದಾಳುಗಳ ನೇತೃತ್ವದಲ್ಲಿ ಒಂದಾಗಿ ದೇಶಕ್ಕಾಗಿ ಜೀವವನ್ನು ಕೊಡಲು ಸಿದ್ಧರಾಗೋಣ. ಪಾರತಂತ್ರ್ಯದ ಸಂಕೋಲೆಯಂತಿದ್ದ ವಿದೇಶೀ ವಸ್ತ್ರವನ್ನು —(Boycott British Goods!)—ವಿದೇಶೀ ವಸ್ತ್ರವನ್ನು ಬಿಸಾಡೋಣ— ! ಅಬ್ಬ ! ಎಂತಹ ವೀರಸಂದೇಶ! ಒಂದು ತಿಂಗಳಲ್ಲಿ ಕೋರ್ಟು-ಕಚೇರಿ-ಶಾಲೆ-ಕಾಲೇಜುಗಳು ಬರಿದಾಗ ತೊಡಗಿದುವು. ದೇಶದ ತುಂಬ ವಿದ್ಯುತ್ತಿನ ಸಂಚಾರವಾಯಿತು. ಹೆಸರಾದ ಮುಂದಾಳುಗಳು ಹಳ್ಳಿಹಳ್ಳಿಗೆ ಹೋಗಿ ಜನತೆಯ ದೇಶಾಭಿಮಾನವನ್ನು ಹೊಡೆದೆಬ್ಬಿಸಿದರು. ಮಾಧವನಿಗೆ ದಿನದ ೨೪ ಗಂಟೆಗಳು ಸಾಲದಂತಾದುವು. ದಿನದಿನಕ್ಕೆ ಉತ್ಸಾಹ, ಆತ್ಮವಿಶ್ವಾಸ ಹೆಚ್ಚತೊಡಗಿದುವು. ಒಂದೇ ವರ್ಷದಲ್ಲಿ ಸ್ವರಾಜ್ಯ ! ಸಂದೇಹವೇನು ? ಚಳವಳದಲ್ಲಿ ಲಕ್ಷಾವಧಿ ಜನರು ಭಾಗವಹಿಸುವುದನ್ನು ನೋಡಿದರೆ ಮುಂದಿನ ಕಾಂಗ್ರೆಸದ ಅಧಿವೇಶನದೊಳಗೆ ಸ್ವರಾಜ್ಯ ಸಿಕ್ಕಬಹುದು ಎಂದೆನ್ನಿಸಿತು ಮಾಧವನಿಗೆ.

ತನಗಾದ ಉತ್ಸಾಹವನ್ನೆ ಮಾಧವನು ತನ್ನ ಉಪನ್ಯಾಸಗಳಲ್ಲಿ ಸೂಸುತ್ತಿದ್ದನು. ತಾನು ಬಡವ, ತಾನು ಕಲಿಯುವುದು ಕಷ್ಟ, ತನ್ನ ಆಸೆ ಈಡೇರದು ಎಂದು ಇದುವರೆಗೆ ಅನೇಕಸಲ ನಿರಾಶೆಯ ಹೊಡೆತಕ್ಕೆ ಸಿಕ್ಕು ಹಿಂದೆ ಬೀಳುತ್ತಿದ್ದ ಮಾಧವನು ಈಗ ಮಹತ್ವಾಕಾಂಕ್ಷೆಯ ಮಹಾಸಾಗರದ ತೆರೆಗಳನ್ನು ಆತ್ಮವಿಶ್ವಾಸದಿಂದ ಬದಿಗೆ ಸರಿಸಿ ಈಸುತ್ತಿದ್ದನು. ಮಹಾತ್ಮಾ ಗಾಂಧಿ! ಭಕ್ತರಿಗೆ ಪರಮಾತ್ಮನಿದ್ದಂತೆ. ಇದರಲ್ಲಿ ಸಂದೇಹವೇನು? ಇಂದು ಮಾಧವನಲ್ಲಿ ಆತ್ಮವಿಶ್ವಾಸ ಹುಟ್ಟಿದೆ, ಸ್ವಾಭಿಮಾನ ಬೆಳೆದಿದೆ, ಸಾಹಸವೃತ್ತಿ ತಲೆ ಎತ್ತುತ್ತಿದೆ. ನಿನ್ನೆ ಅಶಕ್ಯವೆನಿಸಿದ್ದು ಇಂದು ಶಕ್ಯವಾಗಿದೆ—ಮಹಾತ್ಮರ

ವೀರವಾಣಿಯ ಪ್ರಸಾದದಿಂದ. ತನ್ನಂತೆ ಲಕ್ಷಾವಧಿ ತರುಣರು ಹೀಗೆ ಪರಿವರ್ತಿಸಿದ್ದಾರೆಂಬುದರ ಬಗ್ಗೆ ಮಾಧವನಿಗೆ ಸಂದೇಹವೆ ಇರಲಿಲ್ಲ.

ಒಂದು ತಿಂಗಳಲ್ಲಿ ಮಾಧವನಿಗೆ ತನ್ನ ದೇಶ ಎಂದರೆ ಯಾವುದೆಂಬುದರ ಕಲ್ಪನೆಯಾಯಿತು. ಮಳೆ–ಬಿಸಿಲುಗಳ ಪರಿವೆ ಇಲ್ಲದೆ ಹೊಲದಲ್ಲಿ ದುಡಿಯುವ ರೈತ, ಸಂಸ್ಕೃತಿಯ ಸಂಪರ್ಕ ಕೂಡ ಇಲ್ಲದೆ ಕ್ರಿಮಿಗಳಂತೆ ಹೊಲಸಿನಲ್ಲಿಯೆ ಹುಟ್ಟಿ ಬೆಳೆಯುವ ಅಸ್ಪೃಶ್ಯರು, ಅವಸರದಿಂದ ಕೂಳನ್ನು ತಿಂದು ಇಡಿಯ ಸೂರ್ಯ ಪ್ರಕಾಶದ ಸಮಯದಲ್ಲಿ ಕಚೇರಿಯಲ್ಲಿ ದುಡಿದು ಬೆನ್ನು ಬಾಗಿದ ತಿಂದುದನ್ನು ದಕ್ಕಿಸದ ಕಾರಕೂನರು, ಓದಲು ಬರೆಯಲು ಬಾರದೆ ಆತ್ಮಜ್ಞಾನ–ಸ್ವಾಭಿಮಾನಗಳನ್ನು ಸಾಲಕ್ಕಾಗಿ ಕಳೆದುಕೊಂಡ ಹಳ್ಳಿಗರು— ಎಂತಹ ದೇಶ! ಇವರು ನಮ್ಮವರು. ಇವರ ಇತಿಹಾಸ ನಾವು ಕಲಿಯಬೇಕಾದುದು, ಹಿಂದುಸ್ತಾನದಲ್ಲಿ ಆಳಿದ ಗವರ್ನರ ಜನರಲ್‌ಗಳದಲ್ಲ. ಇವರಿಗಾಗಿ ದುಡಿಯಬೇಕು ನಾವು. ಸೇವೆ–ಸಲಾಮುಗಳಿಂದ ಕೊಬ್ಬಿ ಸ್ವದೇಶಕ್ಕೆ ಮರಳುವ ಸಾಹೇಬರಿಗಾಗಿ ಅಲ್ಲ....ಮಾಧವನಿಗೇ ಆಶ್ಚರ್ಯವಾಯಿತು. ದಿನದಿನಕ್ಕೆ ತನ್ನ ಉಪನ್ಯಾಸಗಳಲ್ಲಿ ಆವೇಶ ಹೆಚ್ಚಾಯಿತಲ್ಲದೆ, ತನ್ನ ಜೀವನ ದೃಷ್ಟಿಯೆ ಬದಲಾಯಿತು. ಕಾಲೇಜದಲ್ಲಿ ಪ್ರೊಫೆಸರರ ಲೆಕ್ಚರುಗಳಿಂದ ಕಲಿಯಲಾರದ್ದನ್ನು ಒಂದೇ ಒಂದು ಗಂಟೆಯ ತನ್ನ ಲೆಕ್ಚರಿನಿಂದ ಕಲಿಯುತ್ತಿದ್ದನು.

ಮಾಧವನ ಪ್ರಭಾವ ಬೆಳೆಯಿತು. ಬೇರೆಬೇರೆ ಕಡೆಗಳಿಂದ ಕರೆ ಬರತೊಡಗಿತು. ಇಷ್ಟೊಂದು ಎಳೆವಯಸ್ಸಿನ ತರುಣನ ಆವೇಶ—ಬುದ್ಧಿಮತ್ತೆಗಳು ಜನರನ್ನು ಬೆರಗುಗೊಳಿಸಿದುವು. ಎದುರು ಸಾವಿರಗಟ್ಟಲೆ ಜನಸಮುದಾಯ ನೆರೆದದ್ದನ್ನು ನೋಡಿ ಮಾಧವನಿಗೂ ಮೈಯುಬ್ಬತೊಡಗಿತು. ತಾನು ಮುಂದಾಳು ಎಂಬ ಸಿದ್ಧಾಂತ ಮಾಧವನಿಗೆ ಅನಿವಾರ್ಯವಾಯಿತು. ಮುಂದಾಳುತನದ ಹೊಣೆ ನಿರ್ವಹಿಸುವುದಕ್ಕೆ ಪ್ರಚಾರಕಾರ್ಯವನ್ನು ಅವಿಶ್ರಾಂತವಾಗಿ ನಡೆಸಿದನು. ತನ್ನ ತಾಲೂಕಿಗೆ ತಾನು ಅನಭಿಷಿಕ್ತ ರಾಜನಾದನು. ಆದರೆ ಕಿರೀಟ ಧರಿಸುವ ರೀತಿ ಮಾತ್ರ ಬೇರೆಯಾಯಿತು, ಅನಿರೀಕ್ಷಿತವಾಯಿತು.

೧೯೨೦ ರ ಡಿಸೆಂಬರ ಪ್ರಾರಂಭಕ್ಕೆ ಸರಕಾರವು ಮಾಧವನನ್ನು ಬಂಧಿಸಿತು. .

. . . .

೯

ಮಾಧವನ ಮೈ ಗದಗದ ನಡುಗಿತು. ಎರಡೂ ಕೈಗಳಿಂದ ಮುಖವನ್ನು ಗಟ್ಟಿಯಾಗಿ ಮುಚ್ಚಿಕೊಂಡು ಕುಳಿತನು. ಎಷ್ಟು ವರ್ಷಗಳ ಹಿಂದಿನ ಮಾತು! ಆದರೆ ಅದರ ಸ್ಮರಣೆಯಾದರೆ ಇಂದಿಗೂ ಆ ದೃಶ್ಯ, ಆ ಅನುಭವ, ಆ ನಿರಾಶೆ, ಅದರ ಪರಿಣಾಮ ಇವುಗಳಿಗಾಗಿ ಮೈ ಚಳಿ ಹಿಡಿದಂತೆ ನಡುಗುವುದು. ಸಿಜವಾಗಿ ತಾನು ಅದನ್ನೆಲ್ಲ ಎಂದಿಗೊ ಮರೆಯಬೇಕಾಗಿತ್ತು. ತನ್ನನ್ನು ಬಂಧಿಸಿದಂದಿನಿಂದ ತನ್ನ ಆಯುಷ್ಯವೆ ಬದಲಾಗಿತ್ತು. ಬಿಡುಗಡೆಯಾದಂದಿನಿಂದ ಜೀವನವೆ ಬದಲಾಗಿತ್ತು. ಆದರೂ ಅನೇಕ ಸಲ ಮಾಧವನ ಕಣ್ಣೆದುರು ಆ ಸ್ಮರಣೆ ರೂಪತಾಳಿ ನಿಲ್ಲುತ್ತಿತ್ತು. ಆ ಸಂದರ್ಭವೆಂತಹದು! ಇಡಿಯ ಜೀವನವೆ ವೀರರಸಮಯವಾದಂತಹದು! ಆ ಭಾಷಣ, ಆ ಪ್ರಸಂಗ, ಆ ಜನಸಮುದಾಯ, ಆ ಆವೇಶ! ಥೂ! ಇದೆಲ್ಲವೂ ಅಣಕಿನಂತಾಯ್ತು. ಎಂತಹ ವೀರರಸಪ್ರಧಾನ ಸನ್ನಿವೇಶಕ್ಕೆ ಎಂತಹ ನೀರಸ ಕೊನೆ! ಭಾಷಣ ನಡೆದಿದೆ, ಪೋಲೀಸ ಪಡೆ ಬಂದಿತು. ಇಡಿಯ ಸಭೆಯ ಲಕ್ಷ್ಯ ಮಾಧವನನ್ನು ಬಿಟ್ಟು ಆ ಕಡೆ ಹೋಯಿತು! "ದೇಶವು ನಮ್ಮನ್ನು ದುರ್ಬಲರನ್ನಾಗಿ ಮಾಡಿದೆ.'' ಶ್ರೀಧರನ ವಾಕ್ಯ. ಈ ಜನರೇ ಉದಾಹರಣೆ. ಒಂದು ನಿಮಿಷ ಮುಂಚೆ ಅಪ್ರಾಸಂಗಿಕವಾಗಿ 'ಜೈ' ಎಂದು ಕಿರುಚುವ ಈ ಜನ ಹಿಂಡು ಈಗ ಒಮ್ಮೆಲೆ ಸ್ತಬ್ಧವಾಗಿದೆ. ವಾತಾವರಣದಲ್ಲಿ ಕಳವಳ, ಮೊಗದ ಕಳೆಯಲ್ಲಿ ಹೆದರಿಕೆ. ಮಾಧವನು ಹಾಗೇ ಭಾಷಣವನ್ನು ಸಾಗಿಸಿದ್ದನು. ಅದು ನಿಷ್ಫಲವಾಗಿದ್ದಿತು. ಕೇಳುವವರ ಲಕ್ಷ್ಯವೆ ಇದ್ದಿರಲಿಲ್ಲ. ಪೋಲೀಸ ಅಧಿಕಾರಿಯು ಮಾಧವನ ಹತ್ತಿರ ಬಂದನು, ಸರಕಾರದ ಆಜ್ಞೆಯನ್ನು ತೋರಿಸಿದನು. ಒಂದೇ ನಿಮಿಷ ಮಾಧವನ ಹೃದಯದಲ್ಲಿ ಒಂದು ಭಾವನೆ ಸುಳಿಯಿತು. ಈ ಆದೇಶವನ್ನು ಧಿಕ್ಕರಿಸೋಣ, ವಿದೇಶೀಯರ ಗುಲಾಮನಾದ ಈ ಅಧಿಕಾರಿಯನ್ನು ಒದೆಯೋಣ, ಜನರನ್ನು ಹುರಿದುಂಬಿಸೋಣ ಎಂದು. ತಟ್ಟನೆ ಆ ಭಾವನೆಯನ್ನು ಹಿಂದೆ ನೂಕಿದನು. ಮಹಾತ್ಮಾ ಗಾಂಧಿಯವರು ಸಾರಿಸಾರಿ

ಹೇಳಿದ್ದಾರೆ ನಮ್ಮ ಚಳವಳ ಅಹಿಂಸಾಮಯವಾಗಿರಬೇಕೆಂದು. ಅದನ್ನು ಪಾಲಿಸಲೇಬೇಕು ಎಂದುಕೊಂಡ. ಆದರೆ ಒಂದು ವೇಳೆ ಸಭಿಕರು ಕೆರಳಿದರೆ ? ತನ್ನ ಬಂಧನಕ್ಕಾಗಿ ರೊಚ್ಚಿಗೆದ್ದು ಹಿಂಸಾಮಯ ಅತ್ಯಾಚಾರಕ್ಕೆ ನುಗ್ಗಿದರೆ ? ಅವರಿಗೆ ಎಚ್ಚರಿಕೆಯನ್ನು ಕೊಡುವುದು ತನ್ನ ಕರ್ತವ್ಯ ಎಂದು ಸಭಿಕರನ್ನು ದಿಟ್ಟಿಸಿದ–ಥೂ! ನಾಚಿಕೆಗೇಡು! ಅವಮಾನಕಾರಕ ದೃಶ್ಯ! ಈ ಜನ ರೊಚ್ಚಿಗೇಳುವರೆ ? ಬೆಕ್ಕಿನ ಸದ್ದಾದಾಗ ಹುದುಗಿಕೊಳ್ಳಲು ಯತ್ನಿಸಿದ ಇಲಿಗಳಂತೆ ಕುಳಿತಿದ್ದಾರೆ! ಅಹಿಂಸೆಯ ಉಪದೇಶದ ಅಗತ್ಯವೆ ಇಲ್ಲ. ಹಿಂಸೆಯನು ಮಾಡುವ ಕಸುವಿದ್ದವನಿಗಲ್ಲವೆ ಅಹಿಂಸೆಯ ಉಪದೇಶದ ಅಗತ್ಯ........ ಮಾಧವನು ತಟ್ಟನೆ ಸಭೆಯಿಂದ ಮುಖ ತಿರುಗಿಸಿದನು. ಅಲ್ಲಿಂದ ಓಡಿ ಹೋಗಬೇಕೆಂಬ ಅವಸರವಿದ್ದವನಂತೆ "ನಡೆಯಿರಿ, ನಾನು ಸಿದ್ಧನಿದ್ದೇನೆ" ಎಂದನು. ಪೋಲೀಸ ಅಧಿಕಾರಿಯು ಮಾಧವನ ಕೈಗೆ ಬೇಡಿಗಳನ್ನು ಬಿಗಿಸಿದನು; ಎರಡೂ ರಟ್ಟೆಗಳಿಗೆ ಹಗ್ಗವನ್ನು ಕಟ್ಟಿ ಎರಡು ಕಡೆ ಪೋಲೀಸರು ಹಿಡಿದರು. ಹೊರಟಿತು ಮೆರವಣಿಗೆ. ಮಾಧವನಿಗೆ ಅಸಹ್ಯವಾಯಿತು, ಏನ್ನು ಮಾಡಬೇಕೆಂಬುದೆ ತಿಳಿಯದಾಯಿತು. ಉಗುಳ್ನುಂಗಿದ. ಕಣ್ಣು ಮುಚ್ಚಿದ. ಬೋಲೋ ಮಹಾತ್ಮಾ ಗಾಂಧೀಕಿ ಜೈ—ಎಂದು ಗಟ್ಟಿಯಾಗಿ ಕೂಗಿದ. ಮರುಗಳಿಗೆಯಲ್ಲಿ ತನ್ನ ಕೂಗಿನ ಪ್ರತಿಧ್ವನಿ ಕೇಳಿಸಿತು. ಕಿವಿ ಮುಚ್ಚಿಕೊಳ್ಳಬೇಕೆಂದರೆ ಕೈಗಳನ್ನು ಕಟ್ಟಿದೆ. ಅಸಹ್ಯ! ಅವಮಾನ! ಪ್ರತಿಧ್ವನಿಯ ಆ ಸದ್ದಿನಲ್ಲಿ ಅವನಿಗೆ ಆತ್ಮವಂಚನೆಯ ದನಿ ಕೇಳಿಸಿದಂತಾಯಿತು. ದೊಡ್ಡ ದೊಡ್ಡ ಹೆಜ್ಜೆಗಳನ್ನಿಡುತ್ತ ಸಾಗಿದನು.

ಅನೇಕ ದಿವಸಗಳ ಅವ್ಯಾಹತ ಉತ್ಸಾಹದ ಜೀವನಕ್ಕೆ ನಿರುತ್ಸಾಹವಾಯಿತು. ಮಾಧವನಿಗೆ ತನ್ನ ವಿಚಾರವಿದ್ದಿರಲಿಲ್ಲ. ತನ್ನಂತೆ ಲಕ್ಷಾವಧಿ ತರುಣರು ಬಂಧನೆಗೊಳಗಾಗುವರು ಎಂಬುದನ್ನು ಬಲ್ಲ. ಆದರೆ–ಒಟ್ಟಾರೆ ಸಂದರ್ಭವೆ ಅವನ ಬುದ್ಧಿಯನ್ನು ಕದಡಿತ್ತು. ಅರಿಯದ ಜನರನ್ನು ಹಠಾತ್ತಾಗಿ ಉತ್ಸಾಹದ ಸಿಂಹಾಸನಕ್ಕೇರಿಸಿ ಒಮ್ಮೆಲೆ ಅವರನ್ನು ನೆಲಕ್ಕೆ ಅಪ್ಪಳಿಸಿದರೆ ಪರಿಣಾಮವೇನಾಗಬಹುದು ? ಒಂದೇ ವರ್ಷದಲ್ಲಿ ಸ್ವರಾಜ್ಯ! ಎಂತಹ ಅಣಕಿನ ಪ್ರಸಂಗ! ತನಗೀಗ ಒಂದು ವರ್ಷದ ಶಿಕ್ಷೆ! ತನ್ನ ಪಾಲಿಗೆ ಇದೇ ಸ್ವರಾಜ್ಯವೆ? 'ಸೈತಾನ ಸರಕಾರ'ದ ದೂತರಾದ ಪೋಲೀಸರಿಗೆ ಕುಂಯ್

ಎನ್ನದೆ ಕೈನೀಡಿ ಜೇಲಿಗೆ ಹೋಗುವುದಾದರೆ ನಮ್ಮ ಹಳ್ಳಿಗರ ಮೇಲೆ .ಅದರ ಪರಿಣಾಮವೇನಾಗುವುದು ? ಇದುವರೆಗೆ ಆಸೆಯಿಂದ, ಆವೇಶದಿಂದ, ದೃಢ ನಿಶ್ಚಯದಿಂದ ತನ್ನ ಜೀವನವನ್ನು ಪುಷ್ಟಿಗೊಳಿಸಿದ್ದನು. ಈಗ ಪೂರ್ತಿಯಾದ ನಿರಾಹಾರ. ಜೀವನಕ್ಕೆ ಎಂತಹ ಆಘಾತ ! ಒಂದು ವರ್ಷದ ಅವಧಿಯ ಶಿಕ್ಷೆ ! ಹೃದಯ, ಬುದ್ಧಿ ಎರಡಕ್ಕೂ ಬಲುವೆುಯ ನಿರುದ್ಯೋಗ. ಕೆಲಸ ಮಾಡುವೆನೆಂಬ ಹುಮ್ಮಸವಿದ್ದಾಗ, ಕೆಲಸ ಮಾಡಲೇಬೇಕೆಂಬ ಅಗತ್ಯವಿದ್ದಾಗ ನಿರಂತರ ನಿರುಪಾಯ ನಿಷ್ಕ್ರಿಯೆ. ಮಾಧವನಿಗೆ ಹೆದರಿಕೆಯಾಯಿತು. ತನ್ನ ವಿಚಾರಗಳು ತನ್ನನು ಮುಂದಾಳಿನ ದ್ರೋಹಕ್ಕೆ ಎಳೆಯುತ್ತಿವೆ ಎಂಬ ಹೆದರಿಕೆಯಾಯಿತು. ಆದರೂ ಮನದ ಸಂಶಯ ಬಿಡಲಿಲ್ಲ. ನಿರುತ್ಸಾಹದ ರೋಗ ಸೋಂಕಿತು ಮನಸ್ಸಿಗೆ. ಕಾಲಾನುಸಾರ ದೇಹಕ್ಕೂ ಬಾಧೆ ಪ್ರಾರಂಭವಾಯಿತು. ಒಂದೆಡೆ ಆಮಾಂಶದ ಬಳಲಿಕೆ, ಇನ್ನೊಂದೆಡೆ ಹಲ್ಲುನೋವಿನ ಬಳಲಿಕೆ. ದೇಹದ ನೋವನ್ನು ತಡೆಯುವ ಯತ್ನಗಳಲ್ಲಿಯೆ ಮಾಧವನಿಗೆ ಎಲ್ಲ ಸಮಯವನ್ನು ಉಪಯೋಗಿಸಬೇಕಾಯಿತು. ಬೇರೆ ವಿಚಾರಕ್ಕೆ ಅವಕಾಶವೆ ಸಿಕ್ಕಲಿಲ್ಲ. ಕ್ರಮೇಣ ಅನಾರೋಗ್ಯವು ಚಿಂತಾಜನಕವಾಯಿತು. ವರ್ಷದ ಅವಧಿಯಲ್ಲಿ ಕನಿಕರದಿಂದ ಸರಕಾರವು ಒಂದು ತಿಂಗಳನ್ನು ಬಿಟ್ಟುಕೊಟ್ಟಿತು. ನವೆಂಬರ (೧೯೩೧) ರಲ್ಲಿ ಮಾಧವನು ಜೇಲಿನಿಂದ ಹೊರಬಿದ್ದನು.

ಜೇಲಿನಿಂದ ಹೊರಬಿದ್ದವನು ಮಾಧವನೆ ? ಎಂದು ತನ್ನದು ತನಗೇ ಸಂಶಯವೆನ್ನಿಸುವಂತಹ ಅವಸ್ಥೆಯಾಗಿತ್ತು ಮಾಧವನದು. ಎಲ್ಲಿ ಹೋಗುವುದು ? ಜೇಲಿನಿಂದ ಹೊರಬಿದ್ದಾಗ ವೀರಮಾಲೆ ಕೊರಳೊಳಗೆ ಬಿದ್ದೀತೆಂದು ಅವನು ನಂಬಿದ್ದನೊ ಏನೊ ? ಆದರೆ ಹೊರಹೊರಟಾಗ ಯಾರೂ ಕಣ್ಣೆತ್ತಿ ಕೂಡ ತನ್ನನ್ನು ನೋಡಲಿಲ್ಲ ಎಂಬುಡಕ್ಕೆ ಅವನ ಎದೆ ಝಲ್ಲೆಂದಂತಾಯಿತು. ಎಲ್ಲಿಗೆ ಹೋಗುವುದು ? ಪುಣೆಯಿಂದ ಮುಂಬಯಿ ಹತ್ತಿರದಲ್ಲಿ. ಅಲ್ಲಿಗೇ ಮುಟ್ಟುವಂತೆ ವ್ಯವಸ್ಥೆ ಮಾಡಿಕೊಂಡನು. ದಾರಿಯಲ್ಲಿ, ಗಾಡಿಯಲ್ಲಿ, ಪ್ರವಾಸದಲ್ಲಿ ಮುಂಬಯಿ ಮುಟ್ಟುವವರೆಗೆ ಅವನಿಗೆ ತಾನು ಬಿಟ್ಟ ದೇಶದ ಗುರುತೇ ಹತ್ತದಂತಾಗಿತ್ತು. ಗಾಡಿಯಲ್ಲಿ ಮುಂಬಯಿಗೆ ಕಾಲೇಜಕ್ಕಾಗಿ ಹೋಗುವ ಅನೇಕ ವಿದ್ಯಾರ್ಥಿಗಳಿದ್ದರು. ಹವಮ್ಮನೂ ಇರಬಹುದೆ ? ಶ್ರೀಧರನೂ ಇರಬಹುದೆ ? ಇದ್ದರೆ ಅನುಕೂಲ ಎಂದುಕೊಳ್ಳುವನು, ಎಲ್ಲಿ

ಕಣ್ಣಿಗೆ ಬೀಳುವರೊ ಎಂಬ ಹೆದರಿಕೆ. ಅಂತೂ ಮುಂಬಯಿ ಮುಟ್ಟಿತು ಮಾಧವನ ದೇಹ. ಮನಸ್ಸು ಎಲ್ಲಿದ್ದಿತೊ ?

ವ್ಹಿಕ್ಟೋರಿಯಾ ಟರ್ಮಿನಸ್. ಗಾಡಿಯ ಕೊನೆಯ ನಿಲ್ದಾಣ. ಗಾಡಿ ನಿಂತಿತು. ಮನಸ್ಸನ್ನು ಕಳೆದುಕೊಂಡ ಮಾಧವನು ಹಾಗೇ ಕುಳಿತಿದ್ದಾನೆ.

" ಮಾಧೂ "

ಮಾಧವನಿಗೆ ದಿಗಿಲುಬಡಿದಂತಾಯಿತು. ಎಂದೊ ಎಲ್ಲಿಯೋ ಕೇಳಿದ ದನಿ ? ದಿಟ್ಟಿಸಿ ನೋಡಿದನು.

"ಮಾ–ಧು !"

ಮಾಧವನ ಗುರುತು ಹತ್ತಿದ್ದಕ್ಕೆ ಅತ್ಯಂತ ಸಂತೋಷದಿಂದ ಹಮ್ಯೂನು ಮುಂದೆ ಬಂದನು. ಏಳಬೇಕೆನ್ನುವಾಗ ಮಾಧವನಿಗೆ ಕಣ್ಣು ಕತ್ತಲೆಗಟ್ಟಿತು. ಕೂಡಲೆ ಹಮ್ಯೂನು ಅವನ ಕೈಯನ್ನು ಹಿಡಿದು ನಿಧಾನವಾಗಿ ಗಾಡಿಯಿಂದ ಇಳಿದನು. ತನಗೆ ಜಗತ್ತಿನಲ್ಲಿ ಇನ್ನು ಯಾರೂ ಇಲ್ಲ ಎಂಬ ಮನಃಸ್ಥಿತಿಯಲ್ಲಿದ್ದ ಮಾಧವನಿಗೆ ನಂಬದಂತಾಯಿತು.

"ನೀನು ಎಲ್ಲಿಂದ ಬಂದೆ, ಹಮ್ಯೂ" ಎಂದ.

"ನಾನು ಇಲ್ಲಿಯೆ ಇರುವೆ"

"ಮುಂಬಯಿಯಲ್ಲಿ ?"

ಹಮ್ಯೂನು ತಲೆತೂಗಿದ. ಇಬ್ಬರು ಮಾತನಾಡುತ್ತ ಪ್ಲ್ಯಾಟಫಾರ್ಮದ ಹೊರಗೆ ನಡೆದರು.

" ನನ್ನ ದುರ್ದೈವ, ಮಾಧೂ. ಎಪ್ರಿಲ್‌ದಲ್ಲಿ ಪರೀಕ್ಷೆ ಪಾಸಾಯಿತು. ಕಾಲೇಜ ತಪ್ಪಿಸಲಿಕ್ಕೆ ನೆವವೆ ಇಲ್ಲದಂತಾಯಿತು. ಎಷ್ಟೋ ಜನ ಸ್ನೇಹಿತರೂ ಬಂದರು. ನನಗೂ ಬರಬೇಕಾಯಿತು."

" ಅನಂತ—? ಶ್ರೀಧರ—?"

" ಅನಂತ ಪಾರಾದ ಇಂಗ್ಲಂಡಕ್ಕೆ. ಶ್ರೀಧರ ಗಟ್ಟಿಗ. ಬರಲೇ ಇಲ್ಲ. ಅವನೇ ಬರೆದಿದ್ದ ನನಗೆ. ನಿನ್ನ ಬಿಡುಗಡೆಯಾಗುವ ದಿನ— "

" ನಾನು ಮುಂಬಯಿಗೆ ಬರುವುದು ನನಗೇ ಗೊತ್ತಿರಲಿಲ್ಲ—"

" ಅವನಿಗೂ ಗೊತ್ತಿರಲಿಲ್ಲ. ಅಲ್ಲಿ ಹೋದರೆ ತಾನು, ಇಲ್ಲಿ ಬಂದರೆ ನಾನು ಭೆಟ್ಟಿಯಾಗಬೇಕು ಎಂದು ತಿಳಿಸಿದ್ದ."

ಇಬ್ಬರೂ ಹೊರಗೆ ಬಂದರು. ಹಮ್ಮೊನು ತಡೆದ, ಮಾಧವನನ್ನು ನೋಡುತ್ತ ನಿಂತ.

" ನನ್ನ ವೇಷ ವಿಚಿತ್ರವಾಗಿದೆಯಲ್ಲವೆ ? " ಎಂದು ಮಾಧವನು ನಗಲು ಯತ್ನಿಸಿದ.

" ಅಲ್ಲ—ನಿನ್ನ—ಟೊಪ್ಪಿಗೆಯನ್ನು ತೆಗೆದು ನನ್ನ ಕೈಯಲ್ಲಿ ಕೊಡು ವೆಯಾ ? ಅಲ್ಲ—ಅಂದ್ರೆ ಕೊಟ್ಬೀಬಿಡು. "

ಮಾಧವನೂ ಚಕಿತನಾದನು. ಹಮ್ಮೊನ ದನಿಯಲ್ಲಿ ಅಧೈರ್ಯ ವಿದ್ದಿತು. ಮಾತನಾಡುವಾಗ ಅವನು ತಟ್ಟನೆ ಅತ್ತಿತ್ತ ನೋಡಿದನು— ಯಾರಿಗೊ ಹೆದರಿದಂತೆ. ಇದೇನು ಅವಸ್ಥೆ ? ತಲೆಯ ಗಾಂಧಿ-ಟೊಪ್ಪಿಗೆ ಯನ್ನೂ ತೆಗೆಯುವ ಅವಮಾನಕ್ಕಿಳಿಯಿತೆ ನಮ್ಮ ಜನತೆಯ ಆವೇಶ ? ಅಥವಾ—ನಾನೂ ಕಾಲೇಜನ್ನು ಸೇರಲು ಬಂದಿರುವೆನೆಂದು ತಿಳಿದಿರುವನೆ ಹಮ್ಮೊ.

" ಹಮ್ಮೊ, ಮತ್ತೆ ಕಾಲೇಜ ಸೇರಲು ಬಂದಿಲ್ಲ. ಟೊಪ್ಪಿಗೆ ತೆಗೆಯು ವುದೇಕೆ ? "

ಹಮ್ಮೊನು ಅತ್ತಿತ್ತ ನೋಡಿ ಒಮ್ಮೆಲೆ ಮಾಧವನ ತಲೆಯಿಂದ ಟೊಪ್ಪಿಗೆಯನ್ನು ಕಸಿದುಕೊಂಡನು. ಮಾಧವನು ಅದನ್ನು ತೆಗೆದುಕೊಳ್ಳಲು ಯತ್ನಿಸುವಾಗ ಕೈ ಚಾಚಲು ಅವನ ಕೈಯನ್ನು ಗಟ್ಟಿಯಾಗಿ ಹಿಡಿದು ಒಂದೂ ಮಾತಿಲ್ಲದೆ ಬಿರಿಬಿರಿ ಮಾಧವನನ್ನು ಅರ್ಧ ಎಳೆದುಕೊಂಡೇ ನಡೆದನು. ಮಾಧ ವನು ಮಾತನಾಡಬೇಕೆನ್ನುವಷ್ಟರಲ್ಲಿ ಹಿಂದಿನಿಂದ " Stop! " ಎಂಬ ಗರ್ಜನೆ ಕೇಳ ಬಂದಿತು. ಹಮ್ಮೊನು ತಡೆದ, ಹಿಂದೆ ನೋಡಲಿಲ್ಲ.

"What is that dirty piece of cloth ?" ಎಂದು ಗದ್ದರಿಸಿತು ದನಿ.

ಹಮ್ಮೊನು ಮೆಲ್ಲನೆ ಕಿಸೆಯಲ್ಲಿ ಕಾಣುವ ಮಾಧವನ ಗಾಂಧಿ ಟೊಪ್ಪಿ ಗೆಯನ್ನು ಒಳಗಿಂದೊಳಗೆಯೆ ಕಾಣದಂತೆ ಮುದ್ದೆ ಮಾಡಿದ.

"Get on, you—"ಎಂಬ ದನಿಯೊಡನೆ ಏನೊ ಒಂದು ಬಿರುಸಾದ ಕಟ್ಟಿಗೆ ಹಮ್ಮೊನನ್ನು ತಿವಿಯಿತು.

ಹಮ್ಮೂನು ಲಗಬಗೆಯಿಂದ ಕೆಳಗೆ ಮುಖ ಮಾಡಿಕೊಂಡು ಮಾಧವನನ್ನು ಎಳೆದುಕೊಂಡು ನಡೆದನು.

೧೦

ಸ್ಟೇಶನ ಆವಾರದ ಹೊರಗೆ ಬಂದರು ಇಬ್ಬರೂ ಗೆಳೆಯರು. ಮಾಧವನು ಪೆಚ್ಚಾದನು. ಅವನ ಹೆಜ್ಜೆಯೆ ನಿಂತಿತು. ಮುಂಬಯಿ ನಗರದ ಜೀವವೆ ಕಳೆದಿದೆ ಎನ್ನುವಷ್ಟು ನಿಃಶಬ್ದ, ನಿರ್ಜನವಾಗಿತ್ತು ಬೀದಿ. ಅಲ್ಲಲ್ಲಿ ಬ್ರಿಟಿಶ ಸೈನಿಕರು ಸಜ್ಜಾಗಿ ನಿಂತಿದ್ದಾರೆ. ಒಳಗೆ ತಮ್ಮ ಮೇಲೆ ಅಬ್ಬರಿಸಿದ ಪ್ರಾಣಿಯೂ ಈ ಜಾತಿಯದೆ ಇರಬಹುದೆಂದು ಮಾಧವನು ತಿಳಿದನು.

“ ಹಮ್ಮೂ, ಏನಿದು ? ”

ಹಮ್ಮೂನು ಮೆಲುದನಿಯಲ್ಲಿಯೆ ಮಾತನಾಡಿದನು.

“ ಕೋಣೆಗೆ ನಡೆ, ಎಲ್ಲವನ್ನೂ ಹೇಳುವೆ ”

ಇಬ್ಬರೂ ಕೆಳಗೆ ಮುಖಮಾಡಿಕೊಂಡು, ಮರು ಗಳಿಗೆಯಲ್ಲಿ ಪ್ರಾಣ ಹೋಗುವುದೇನೊ ಎನ್ನುವವರಂತೆ ನಡೆದರು. ಒಂದು ಕುದುರೆಯ ಗಾಡಿ ಇಲ್ಲ, ಒಂದೂ ಟ್ರ್ಯಾಮ್ ಇಲ್ಲ, ತಿರುಗಾಡುವ ಜನರೂ ಇಲ್ಲ, ತಮ್ಮ ಹೆಜ್ಜೆಯ ಸದ್ದು ಕೇಳಿಸಿ ಭೀತಿ ಹುಟ್ಟುವಂತಹ ನಿಶ್ಶಬ್ದತೆಯ ಕತ್ತಲಲ್ಲಿ ಮೆಲ್ಲಗೆ ಹೆಜ್ಜೆಯನ್ನಿಡುತ್ತ ನಡೆದರು. ಧೋಬೀ ತಲಾವಿನ ಹತ್ತಿರ ಬರುವಷ್ಟರಲ್ಲಿ ಬಲಗಡೆಯಿಂದ ಕಿರ್ ಎಂಬ ಶಬ್ದವು ವೇಗವಾಗಿ ಧಾವಿಸುತ್ತ ತಮ್ಮ ಕಡೆಯೆ ಬರುತ್ತಿರುವಂತೆ ಭಾಸವಾಯಿತು. ಎದುರು ಗಿರಗಾಮಿನಿಂದಲೂ ಅದೇ ಸದ್ದು. ಮಾಧವನು ಆಶ್ಚರ್ಯದಿಂದ ನಿಲ್ಲಬೇಕೆನುವಷ್ಟರಲ್ಲಿ ಹಮ್ಮೂನು ಅವನನ್ನು ಎಳೆಯುತ್ತ ಒಂದೇ ಸವನೆ ಗಿರಗಾಮಿನಲ್ಲಿ ರಸ್ತೆ ಸೇರಲು ಓಡಿದನು. ಮರು ಗಳಿಗೆಯಲ್ಲಿ ಕರ್ಣಕಟುಕವಾದ ಸಿಡಿಲು ಕೇಳಿದಂತಾಯಿತು. ಮಾಧವನು ತಡೆದನು, ಹಮ್ಮೂನೂ ತಡೆದನು. ಇಬ್ಬರೂ ಮುಖ ತಿರುವಿ ಧೋಬೀ ತಲಾವಿನ ಕಡೆ ನೋಡಿದರು— !—ಎರಡು ಬರಿದಾದ ಟ್ರಾಮುಗಳು ಒಂದನ್ನೊಂದಕ್ಕೆ ವೇಗದಿಂದ ತಾಕಲಾಟವಾಡಿ ನಿಂತಿವೆ— ! ಘರ್ಷಣದಿಂದ ಉರಿ ಎದ್ದಿದೆ ! ಇನ್ನೊಂದು ಗಳಿಗೆಯಲ್ಲಿ ಕಿರ್ ಎಂದು ಚೀರುತ್ತ ವೇಗವಾಗಿ ಸಾಗುವ ಒಂದು ಮೋಟಾರ ಗಾಡಿ, ಅದರೊಳಗಿಂದ ಸೈನಿಕರು ತೋರಿದಂತೆ ಗುಂಡು ಹಾರಿಸುವುದು ಅಷ್ಟರಲ್ಲಿ ಹಮ್ಮೂನು ಮಾಧವನನ್ನು ಬದಿಯು

ಬೀದಿಗೆ ಎಳೆದುದು—ಮಾಧವನಿಗೆ ದಿಕ್ಕುಗಾಣದಂತಾಯಿತು. ಅವನಿಗೆ ತಿಳಿದದ್ದು ಒಂದೇ. ಬದಿಯ ಚಿಕ್ಕ ಬೀದಿಯಲ್ಲಿ ಓಡುವಾಗ ಮೇಲಿನ ಅಂತಸ್ತಿನಿಂದ ಒಬ್ಬ ಮುದುಕನು ಚೀರಿ ಇವರ ದಾರಿಯಲ್ಲಿ ಬಿದ್ದದ್ದು. ಆ ಮುದುಕನ ಎದೆಯಿಂದ ರಕ್ತ ಚಿಮ್ಮುತ್ತಿತ್ತು.

ವೇಗದಿಂದ ಸಾಗಿದ ಸೈನಿಕರ ಗುಂಡು ಅವನ ಎದೆಯನ್ನು ಭೇದಿಸಿತ್ತು!

ಆದರೆ ಮಾಧವನಿಗೆ ಒಟ್ಟಾರೆ ಎಚ್ಚರತಪ್ಪಿದಂತೆಯೆ ಆಗಿತ್ತು. ಹಮ್ಮೂನ ಕೋಣೆಯೊಳಕ್ಕೆ ಹೊಕ್ಕು ಬಾಗಿಲನ್ನು ಮುಚ್ಚಿಕೊಂಡ ಮೇಲೆಯೆ ಅವನಿಗೆ ಎಚ್ಚರ ಬಂದಿತು. ಮೇಜಿನ ಮೇಲಿನ ಗಡಿಯಾರವನ್ನು ನೋಡಿದ. ಸ್ಟೇಶನದಿಂದ ಇಲ್ಲಿಗೆ ನಡೆದು ಬರಲು ನಾಲ್ಕು ತಾಸು!

ತಾನು ನಡೆಯುತ್ತ ಬಂದಿದ್ದರೂ ತನಗೆ ಎಚ್ಚರ ತಪ್ಪಿತ್ತೆಂದು ಮಾಧವನಿಗೆ ಇನ್ನೊಂದು ಸಂಗತಿಯಿಂದ ತಿಳಿದು ಬಂದಿತು. ಕೋಣೆಯೊಳಕ್ಕೆ ಬಂದ ಮೇಲೆ ಈಗಲಾದರೂ ಟೊಪ್ಪಿಗೆಯನ್ನು ಹಾಕಿಕೊಳ್ಳೋಣ ಎಂದು ಅದನ್ನು ತೆಗೆದು ಮುಚ್ಚಿಟ್ಟ ನಾಚಿಕೆಗಾಗಿ ತುಸು ಬಿರುಸುದನಿಯಲ್ಲಿಯೆ ಕೈಚಾಚಿದನು.

"ಇನ್ನಾದರೂ ಟೊಪ್ಪಿಗೆ ತಾ."

ಹಮ್ಮೂ ನಸುನಗೆಯಿಂದ ಹೇಳಿದ, "ಟೊಪ್ಪಿಗೆ ನಿನ್ನ ತಲೆಯ ಮೇಲೆಯೆ ಇದೆ."

"ತಲೆಯ ಮೇಲೆ?"

ಮಾಧವನು ಚಕಿತನಾದನು. ತಲೆಗೆ ಕೈಹಚ್ಚಿ ನೋಡಿದನು. ನಿಜ. ತಲೆಯ ಮೇಲೆಯೆ ಇದೆ! ತನಗೇನು ಸ್ಟೇಶನದಲ್ಲಿ ಕನಸು ಬಿದ್ದಿರಲಿಕ್ಕಿಲ್ಲವಷ್ಟೆ?

"ಅಲ್ಲ—ನೀ—ಅದನ್ನ ಕಿಸೇದೊಳಗ ಇಟ್ಟಿದ್ದಿಲ್ಲ?" ಅಧೈರ್ಯದಿಂದ ಕೇಳಿದ.

ಹಮ್ಮೂ ಈಗ ಗಟ್ಟಿಯಾಗಿ ನಕ್ಕ.

"ಮಾಧೂ, ಮುಂಬಯೀಕಾ ಮೋಜ ದೇಖೋ ಅದು. ಧೋಬೀತಲಾವಿನ ವರೆಗೆ ಗಾಂಧೀ ಟೊಪ್ಪಿಗೆ ತಲೆಯ ಮೇಲಿದ್ದರೆ ತಲೆ ಒಡೆಯುವರು. ಅಲ್ಲಿಂದ ಗಿರಗಾಮಿಗೆ ಬರುವಾಗ ಗಾಂಧೀ ಟೊಪ್ಪಿಗೆ ತಲೆಯ ಮೇಲೆ

ಇಲ್ಲದಿದ್ದರೆ ತಲೆ ಒಡೆಯುವರು! ಅದಕಾಗಿ, ಇಲ್ಲಿ ಬರುವಾಗ ನಿನ್ನ ತಲೆಯ ಮೇಲೆಯೆ ಇಟ್ಟದ್ದೆ....ತಲೀನೂ ಬೇಕು, ಟೊಪ್ಪಿಗೀನೂ ಬೇಕು....ಮಾಡೋದೇನು ಹೇಳು."

ಮಾಧವನು ಮಂಚದ ಮೇಲೆ ಬಿದ್ದುಕೊಂಡನು.

"ಅಲ್ಲೊ, ಹಮ್ಯೂ, ಇದೇನು ಪರಿಸ್ಥಿತಿ, ನಡೆದಿದೆ ಏನು —"

"ಮೊದಲು ಚಹ ಕುಡಿಯೋಣ, ಆ ಮೇಲೆ ಚರ್ಚಾ" ಎನ್ನುತ್ತ ಹಮ್ಯೂನು ಎದ್ದು ಸ್ಟವ್‌ನ್ನು ಹೊತ್ತಿಸಿದನು.

೧೧

ಮಾಧವನಿಗೆ ಸುದ್ದಿಯನ್ನು ಕೇಳಬೇಕೆಂದು ಆತುರ. ಬಿಸಿಬಿಸಿ ಚಹವನ್ನೆ ಕುಡಿದನು. ಮುಖವೆಲ್ಲ ಬೆವರೊಡೆಯಿತು. ಮುಂಬಯಿಯ ಬೆವರು—ನೀರಿನಲ್ಲಿ ಮುಳುಗಿ ಎದ್ದಂತೆ ತಟತಟ ಹನಿ ಉದುರಿ ಬೀಳತ್ತಿತ್ತು. ಮುಂಬಯಿಯಲ್ಲಿ ನಡೆಯುತ್ತಲಿದ್ದ ಅಪೂರ್ವ, ಅಮಾನುಷ ಅತ್ಯಾಚಾರಗಳನ್ನು ಕೇಳಿಕೇಳಿದಂತೆ ಶರೀರದ ರೋಮ-ರೋಮದಿಂದಲೂ ಕಣ್ಣೀರು ಸುರಿಯುತ್ತಿದೆಯೆ ಎನ್ನುವಂತೆ ಮಾಧವನ ದೇಹದ ತುಂಬ ಬೆವರ ಹನಿಗಳು ಮಿಂಚತೊಡಗಿದುವು.

ಎಂತಹ ಅತ್ಯಾಚಾರ! ಇಂಗ್ಲಂಡದ Prince of Wales (ಯುವರಾಜ)ನು ಬಂದಿದ್ದಾನಂತೆ, ಅದಕಾಗಿ ಕೊಲೆ! ಸುಲಿಗೆ! ಕೊಳ್ಳೆ! ದಂಗೆಗಾರರ ಅಮಾನುಷ ಹೊಡೆತದಿಂದ ಸತ್ತವರೆಷ್ಟು ಜನ! ಸೈನಿಕರ ಸಿಕ್ಕಾಪಟ್ಟೆ ಹಾರಿಸುವ ಗುಂಡಿಗೆ ಗುರಿಯಾದವರೆಷ್ಟು ಜನ! ಎಷ್ಟೊ ಕಟ್ಟಡಗಳೂ ವಾಹನಗಳೂ ಸುಟ್ಟು ಭಸ್ಮವಾಗಿವೆ!

ಹೇಳುವಾಗ ಹಮ್ಯೂನ ದನಿಯಲ್ಲಿ ಹೆಮ್ಮೆ ಇದೆ, ಸೇಡು ತೀರಿಸಿದಂತಹ ಸಮಾಧಾನವಿದೆ. ಮಾಧವನಿಗೆ ಮಾತ್ರ ಒಮ್ಮೆಲೆ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಹಿಂಸೆ! ನಿಷ್ಪ್ರಯೋಜಕ ಹಿಂಸೆ! ತನ್ನವರಲ್ಲಿ ಹಿಂಸೆ ಮಾಡುವಷ್ಟು ಕಸುವಿಲ್ಲ ಎಂದು ಕಳೆದ ವರ್ಷ ತಾನು ಕನಲಿದ್ದು ಸ್ಮರಣೆಗೆ ಬಂದು ಅವನಿಗೆ ನಾಚಿಕೆಯಾಯಿತು. ಹಿಂಸೆ ಎಂದರೆ ಹಾನಿ, ನಿಷ್ಪ್ರಯೋಜಕ ಹಿಂಸೆ ಎಂದರೆ ಪಾಪ—ಎಂದನು.

ಹಮ್ಮೂನು ಪ್ರತಿಭಟಿಸಿದನು.

" ಮಾಧೂ, ನಾನು ಕಣ್ಣಾರೆ ನೋಡಿದ್ದೇನೆ. ಸೈನಿಕರು ಮಾಡುತ್ತಿರುವ ಅತ್ಯಾಚಾರವನ್ನು ನೋಡಿದೆ ಎಂದರೆ ನಿನಗೂ ನನ್ನಂತೆ ಸಮಾಧಾನವೆ ಆದೀತು."

ವಿಷಾದದಿಂದ ಭಾರವಾದ ತಲೆಯನ್ನು ಮಾಧವನು ಮೆಲ್ಲಗೆ ಜಾಡಿಸಿದನು. ಬಾಯಿಯಿಂದ ಶಬ್ದ ಹೊರಬೀಳಲು ತಡವಾಗುವಷ್ಟು ಆಘಾತವಾಗಿತ್ತು ಅವನಿಗೆ.

"ಹಮ್ಮೂ, ಈ ದಂಗೆಯಿಂದ ದೇಶದ ಮಾನ ಹೋಯಿತು, ಚಳವಳದ ನೀತಿ ಕೆಟ್ಟಿತು."

"ಚಳವಳ ಎಂದೋ ಹಾಳಾಗಿದೆ" ಎಂದು ಸಿಟ್ಟಿನಿಂದಲೆ ನುಡಿದ ಹಮ್ಮೂ.

"ಏನೆಂದೆ ?"

"ಚಳವಳ ಹಾಳಾಗಿದೆ ಎಂದೆ. ನಿನ್ನಂತಹ ನಾಲ್ಕಾರು ಸರಳಮನಸ್ಸಿನ ಹುಚ್ಚರನ್ನು ಬಿಟ್ಟರೆ ಬೇರೆ ಯಾರೂ ಇಲ್ಲ ಚಳವಳದಲ್ಲಿ. ವಕೀಲರೆಲ್ಲ ವ್ಯವಸಾಯವನ್ನು ಹೆಚ್ಚಿನ ಹುರುಪಿನಿಂದ ಕೈಕೊಳ್ಳುತ್ತಿದ್ದಾರೆ; ತರುಣರು ಶಾಲೆ–ಕಾಲೇಜುಗಳನ್ನು ಸೇರುತ್ತಿದ್ದಾರೆ—"

"ಆದರೆ ಮಹಾತ್ಮರು ಚಳವಳವನ್ನು ನಿಲ್ಲಿಸಿಲ್ಲ ?"

"ಇಲ್ಲ, ನಿಮ್ಮ ಮಹಾತ್ಮಾ ಜನರ ದಂಗೆ ನಿಲ್ಲಿಸಲಿಕ್ಕೆ ಇಲ್ಲಿಯೆ ಮುಂಬಯಿಯೊಳಗೇ ಓಡಾಡುತ್ತಿದ್ದಾನೆ, ಶಾಂತಿ ಶಾಂತಿ ಎನ್ನತಾ."

ಹಮ್ಮೂನ ದನಿಯಲ್ಲಿಯ ತಿರಸ್ಕಾರವನ್ನು ಕಂಡು ಮಾಧವನಿಗೆ ಅತೀವ ಖೇದವೆನ್ನಿಸಿತು.

"ಒಂದು ವರ್ಷದೊಳಗ ಸ್ವರಾಜ್ಯ ಅಂತ ಇಲ್ಲದ ಆಶಾ ಕೊಟ್ಟು ಜನರನ್ನು ಅಡ್ಡ ಹಾದಿ ಹಿಡಿಸೋದು, ಈಗಂತೂ ಜೀವ ಉಳಿಸಕೊಳ್ಳಲಿಕ್ಕೆ ತಾವು ಧೈರ್ಯದಿಂದ ಹೊಡೆದಾಡಬೇಕೆಂದರೆ ಶಾಂತಿ–ಶಾಂತಿ ಅಂತ ಮತ್ತೆ ಅವರ್ನ ತಡೀಲಿಕ್ಕೆ ಹೋಗೋದು !"

"ಅದಲ್ಲ, ಹಮ್ಮೂ. ನಂ ಸೇನಾಪತಿಯ ಮಾತನ್ನು ನಾವೇ ಕೇಳದಿದ್ದರೆ ನಂ ಶತ್ರು ಆ ಸೇನಾಪತಿಗೆ ಬೆಲೆ ಕೊಡೋದಾದರೂ ಹ್ಯಾಗೆ ?"

“ ಸದ್ಯದ ಸಂದರ್ಭದೊಳಗ ನೀನೊಬ್ಬನೆ ಸೇನಾ, ನಿಮ್ಮಹಾತ್ಮನೆ ಪತಿ ಕಾಣ್ತದ.”

ಪಾದಿಸುವ ಮನಃಸ್ಥಿತಿಯಲ್ಲಿ ಹಮ್ಮೂನು ಇಲ್ಲೆಂಬುದನ್ನು ಕಂಡನು ಮಾಧವನು. ದನಿಯಲ್ಲಿ ಇಷ್ಟೊಂದು ಕಠೋರತೆ ಇದೆ ಎಂದರೆ ಯಾವುದೊ ದೊಡ್ಡ ಆಘಾತವಾಗಿರಬೇಕು ಹಮ್ಮೂನ ಹೃದಯದ ಮೇಲೆ. ಅಥವಾ, ತರ್ಕಿಸುವುದಾದರೂ ಯಾಕೆ? ಸ್ಟೇಶನದಲ್ಲಿ ನಡೆದ ಘಟನೆಯೆ ಸಾಕಲ್ಲವೆ? ಆಳಿಗಿಂತ ಆಳಾಗಿ, ಯಾರು ಹೊಡೆಯುವರೊ ಎಂಬ ಹೆದರಿಕೆಯಿಂದ ಬೀದಿಯ ದಂಡೆಗೆ ಮುದುಡಿಕೊಂಡು ನಡೆಯುವ ಸ್ವೈರ ನಾಯಿಯಂತೆ ವರ್ತಿಸಿ, ಕೊನೆಗೂ ಕಲ್ಲೊಗೆಸಿಕೊಂಡಂತೆ ಆ ಸೈನಿಕನಿಂದ ತಿವಿಯಲ್ಪಟ್ಟದ್ದು ಯಾವ ತರುಣನನ್ನಾದರೂ ಕೆಣಕಬಹುದಾಗಿತ್ತು, ಕೆರಳಿಸಬಹುದಾಗಿತ್ತು. ಯಾಕೆ—? ಒಮ್ಮೆಲೆ ಇಂತಹ ಅವಮಾನಕಾರಕವಾಗಿ ಪರಿಸ್ಥಿತಿ ಹಳಸಿತು ಯಾಕೆ?

ಯಾಕೆ—ಯಾಕೆ? ಆ ರಾತ್ರಿ ಈ ಪ್ರಶ್ನೆ ಮಾಧವನ ತಲೆಯನ್ನು ಹಿಡಿಯಿತು, ಅಂದು ತನ್ನನ್ನು ಬಂಧಿಸಿದಾಗ ಒದೆಸಿಕೊಂಡ ನಾಯಿಯಂತೆ ಕುಳಿತ ಸಭಿಕರ ಹೇಡಿತನ, ಇಂದು–ಅಹಿಂಸೆಯ ಪ್ರಚಾರ ಒಂದು ವರ್ಷದ ವರೆಗೆ ನಡೆದ ನಂತರ—ವನ್ಯಪಶುಗಳಂತೆ ಅತ್ಯಾಚಾರಕ್ಕೆ ಹರಿಬಿದ್ದ ಜನತೆಯ ಹುಂಬತನ—ಈ ಗೂಢದ ಉತ್ತರವೇನು? ಆತ್ಮರಕ್ಷಣೆಗಾಗಿ ಶೂರನಾಗುವುದು ಪ್ರತಿಯೊಂದು ಪ್ರಾಣಿಯ ಸ್ವಭಾವ; ಶಕ್ತಿಯನ್ನರಿಯುಕೊಂಡು, ಅದನ್ನು ಸಂಘಟಿಸಿಕೊಂಡು, ಉದ್ದಿಶ್ಯಸಾಧನೆಗಾಗಿ ಶೂರನಾಗುವುದು ಬುದ್ಧಿವಂತಿಕೆಯ ಸ್ವಭಾವ. ನಮ್ಮ ಜನತೆಯಲ್ಲಿ ಬುದ್ಧಿವಂತಿಕೆಯ ಅಭಾವವಿದ್ದಂತೆ ತೋರುತ್ತದೆ....ಅಹುದು....ಅದಕಾಗಿಯೆ ಕೋಣೆಯಲ್ಲಿ ಪಾರಾಗಲು ದಾರಿ ಕಾಣದ ಬೆಕ್ಕು ಹುಲಿಯಂತೆ ಹಾರುವಂತೆ, ಗತಿಗೇಡಾದಾಗ, ದಿಕ್ಕುಕಾಣದಂತಾದಾಗ ಇವರು ಕೊಲೆ-ಸುಲಿಗೆ-ಕೊಳ್ಳೆಗಳನ್ನು ನಡೆಸುತ್ತಾರೆ. ಇಂದು ಮುಂಬಯಿಯಲ್ಲಿ ಹಮ್ಮೂನು ಹೇಳುವಂತೆ ‘ಹರಹರ ಮಹಾದೇವ’ನೂ ‘ಅಲ್ಲಾಹೋಅಕ್ಬರ’ನೂ ಭುಜಕ್ಕೆ ಭುಜ ಹಚ್ಚಿ ಹೋರಾಡುತ್ತಿದ್ದರೆ ಅದು ಹೌಹಾರಿದ ಹೇಡಿಗಳ ಆತ್ಮರಕ್ಷಣೆಯ ಪುಂಡಾಟಿಕೆ; ಧೃಢನಿಶ್ಚಯದ, ಬುದ್ಧಿಪೂರ್ವಕವಾದ, ಧ್ಯೇಯಸಿದ್ಧಿಯ ಕಲಿತನವಲ್ಲ. ಇದನ್ನೆಲ್ಲ

ನೋಡಿ ಹಮ್ಮೂನಿಗೆ ಸಂತೋಷವಾಗಿದ್ದರೆ ತನ್ನನ್ನು ಹೊಡೆದ ದಾಂಡಿಗನು ದಾರಿಯಲ್ಲಿ ಕಲ್ಲನ್ನೆಡವಿ ಬಿದ್ದಾಗ ಮೇಲಂತಸ್ತಿನ ಕಿಡಿಕಿಯ ಹಿಂದೆ ಹುದುಗಿ ನಗುವ ನರ ಸತ್ತ ಹೇಡಿಗಾದ ಸಂತೋಷದಂತೆ....ಮಾಧವನಿಗೆ ಮತ್ತೆ ಚೈತನ್ಯ ಬಂದಂತಾಯಿತು....ಜೇಲಿನಿಂದ ಹೊರಬಿದ್ದಾಗ ಮುಸುಕಿದ ಮಂಜು ಕ್ರಮೇಣ ಬಯಲಾಗತೊಡಗಿತು....ತನಗೆ ಯಾರೂ ಗೆಳೆಯರಿಲ್ಲ, ದೇಶದಲ್ಲಿ ತನ್ನವರೆಂಬವರಿಲ್ಲ ಎಂದುಕೊಂಡ ಮಾಧವನಿಗೆ ಇಡಿಯ ದೇಶವೆ ತನ್ನದೆನ್ನಿಸಿತು, ದೇಶಕ್ಕಾಗಿ ಮತ್ತೆ ದೇಹ ಸವೆಯಿಸಬೇಕೆಂಬ ಲವಲವಿಕೆ ಮೊಳಕೆ ಒಡೆಯಿತು....ಆದರೆ—ಆದರೆ—ಇನ್ನು ದುಡಿಯುವುದು ಬೇರೆ ದೃಷ್ಟಿಯಿಂದ; ಕಳೆದ ವರ್ಷದ ಧ್ಯೇಯ, ಉತ್ಸಾಹ, ಹುಮ್ಮಸ—ಇವೆಲ್ಲ ಕಳೆದು ಹೋಗಿದ್ದುವು; ಅವು ಕಳೆದೇ ಹೋದುವು, ಮರಳಿ ಬರುವಂತಿಲ್ಲ. ಈಗ ಕೆಲಸಕ್ಕೆ ಮುಂದಾಗುವ ಮಾಧವ ಮತ್ತೊಬ್ಬನಾಗಿದ್ದಾನೆ; ಒಂದೇ ವರ್ಷದಲ್ಲಿ ಸ್ವರಾಜ್ಯ ಎಂಬುದು ಹುಡುಗಾಟವಷ್ಟೆ ಅಲ್ಲದೆ, ಅರಿಯದ ಹಳ್ಳಿಗರಿಗೆ ಮಾದಕ ಸೇವನದಂತೆ ಘಾತಕವಾಗಿದೆ....ಶ್ರೀಧರನ ಮಾತು ನಿಜ.... ದೇಶವೆ ನಮ್ಮನ್ನು ದುರ್ಬಲರನ್ನಾಗಿ ಮಾಡಿದೆ....ದೇಶವೆಂದರೆ ಸಂಪ್ರದಾಯ ....ಈಗ ಸಂಪ್ರದಾಯವನ್ನೆ ಬದಲಾಯಿಸಬೇಕು. 'ರಾಮರಾಜ್ಯ' ಎಂಬ ಶಬ್ದ ಬೇಡ....ಅದರಿಂದ ಅರಿಯದ, ಅಂಥ ಆಜ್ಞಾಧಾರಕತೆಯ ಸಂಪ್ರದಾಯ ಸೂಚಿಸಲ್ಪಡುತ್ತಿದೆ; ಅವತಾರ ಪುರುಷನೆ ಆಧಾರ ಎಂಬ ಪರಾವಲಂಬತನದ ಸಂಪ್ರದಾಯ ಕಣ್ಮುಂದೆ ನಿಲ್ಲುತ್ತಿದೆ....ಶ್ರೀಧರನ ಬುದ್ಧಿಶಕ್ತಿ ಎಂತಹದು!....ಹೃದಯವಾದರೂ ಎಂತಹದು!....ನನ್ನ ಬಿಡುಗಡೆಯ ದಿನವನ್ನು ಕಂಡು ವ್ಯವಸ್ಥೆಯನ್ನು ಮಾಡುವ ಸಂಘಟನಾಶಕ್ತಿಯ ಸಹೃದಯನವ!.... ಕಾಲೇಜ ಬಿಡುವುದಿಲ್ಲೆಂದ, ಆದರೂ ಅದನ್ನು ಬಿಟ್ಟುಬಿಟ್ಟ....ಇಂದು ಹಮ್ಮೂನಂತಹ ನೂರಾರು ತರುಣರು ಶರಣಾಗತರಾದವರಂತೆ ಜೋಲು ಮೋರೆಯಿಂದ ಮರಳಿ ಕಾಲೇಜನ್ನು ಸೇರಿದ್ದಾರೆ, ಆದರೂ ಶ್ರೀಧರ ಬಂದಿಲ್ಲ ....ಅವನನ್ನು ಕಾಣಲೇಬೇಕು....ಹಿಂದಿನ ನನ್ನ ನಡತೆಗಾಗಿ ಕ್ಷಮೆಯನ್ನು ಬೇಡಬೇಕು. ಮುಖ್ಯ, ಅವನಿಂದ ಮುಂದಿನ ದಾರಿಯನ್ನು ಕಾಣಿಸಿಕೊಳ್ಳಬೇಕು.... .... .... ....

ಮುಂದೆ ೨-೩ ದಿನ ಮುಂಬಯಿಯು ಸಾಕ್ಷಾತ್ ಸ್ಮಶಾನದಂತಿದ್ದಿತು.

ಗೆಳೆಯರಿಬ್ಬರೂ ಕೋಣೆ ಬಿಟ್ಟು ಹೊರಬೀಳಲೆ ಇಲ್ಲ.... ಚರ್ಚೆಗೆ ಬೇಕಾದಷ್ಟು ಅವಕಾಶ ದೊರೆಯಿತು. ಚರ್ಚಿಸದೆ ಇದ್ದ ವಿಷಯವೆ ಉಳಿಯಲಿಲ್ಲ. ಆದರೆ ಒಂದು ಮಾತಿನ ನಿರ್ಧಾರ ಮಾತ್ರ ಆಗಿತ್ತು. ಹಮ್ಮ್ಯಾನ ಯಾವ ಯುಕ್ತಿ ವಾದವೂ ಮಾಧವನ ಮನಸ್ಸನ್ನು ಭೇಧಿಸಲಿಲ್ಲ. ಕಾಲೇಜಿಗೆ ತಾನು ಏನು ಮಾಡಿದರೂ ಹೋಗಲಿಕ್ಕಿಲ್ಲ ಎಂದು ಮಾಧವನು ಖಂಡತುಂಡವಾಗಿ ಹೇಳಿದನು. ಕೊನೆಗೆ ಹಮ್ಮ್ಯಾನು ಹೊಸ ಯುಕ್ತಿಯನ್ನು ಹುಡುಕಿದನು.

" ಮಾಧೂ, ನಿನ್ನ ಮದುವೆಯಾದದ್ದನ್ನು ಮರೆಯಬೇಡ" ಎಂದನು.

ಮಾಧವನು ನಿಜವಾಗಿಯೆ ಮರೆತಿದ್ದನು! ಆದರೆ ಅದನ್ನು ತೋರಗೊಡಬಾರದೆಂದು ಹಟದ ದನಿಯಲ್ಲಿ " ಆದರೇನು ? " ಎಂದ.

" ನಿನ್ನ ಹಟಕ್ಕಾಗಿ ಹೆಂಡಿರು-ಮಕ್ಕಳು ತಮ್ಮ ತಪ್ಪಿಲ್ಲದೆ ಉಪವಾಸ ಸಾಯಬೇಕೆ ? "

" ಹುಟ್ಟಿಸಿದ ದೇವ ತಾ ಹುಲ್ಲು ಮೇಯಿಸುವನೆ—"

" ಸಾಕು. ತತ್ತ್ವಜ್ಞಾನದ ಉಪದೇಶ ಬೇಡ— "

" ಇದು ನನ್ನ ಉಪದೇಶವಲ್ಲ, ಹಮ್ಮ್ಯಾ. ಅಸಹಕಾರದ ಪ್ರಾರಂಭಕ್ಕೆ ತಾನು ವಕೀಲಿ ಬಿಡಲಾರದೆ ತರುಣರಿಗೆ ಶಾಲೆ-ಕಾಲೇಜು ಬಿಡಿರಿ ಎಂದು ಲೆಕ್ಚರ ಕೊಟ್ಟ ಮುಂದಾಳು ಇದನ್ನು ಹೇಳಿದ್ದ. ಅದನ್ನೆ ನಾನು ನನ್ನ ಹೆಂಡಿರು-ಮಕ್ಕಳಿಗೆ ಹೇಳುವೆ " ಎಂದ.

. . . . .

ಹೆಂಡಿರು ಮಕ್ಕಳು! ಮಾಧವನು ಕನಸಿನಿಂದೆಚ್ಚೆತ್ತನು.—ಹಗಲುಗನಸಿನಿಂದ ! ಎಂತಹ ಅಘಟಿತಘಟನಾ ಶಕ್ತಿ ಇದೆ ಮನಸ್ಸಿಗೆ ! ಬೇಡ ಎಂದರೂ ನೂರಾರು ಚಿತ್ರಗಳನ್ನು ನೆನೆದು ಮುಂದೆ ತಂದು ನಿಲ್ಲಿಸುತ್ತಿದೆ. ಹೆಂಡಿರು ಮಕ್ಕಳು ! ಅದೊಂದು ರೂಢಿಯ ಮಾತು. ಅಥವಾ—ಮಾತಿನ ರೂಢಿ.... ತನಗೆ ಹೆಂಡತಿ, ಮಗ— ಇದಿಷ್ಟೆ ಸಂಸಾರವಾಗಿದ್ದಿತು. ಈಗ ಉಳಿದುದು ಮಗ ಒಬ್ಬನೆ ! ಅವನೂ ಹತ್ತಿರದಲ್ಲಿಲ್ಲ. ಮಾಧವನ ಮನಸ್ಸಿಗೆ ಹೆದರಿಕೆಯಾಯಿತು. ಮೆರವಣಿಗೆ ಯಾವಾಗ ಬಂದೀತು, ಅದರಲ್ಲಿ ಮಗನ ಮುಖವನ್ನು ಯಾವಾಗ ಕಂಡೇನು— ಎಂದು ಅವನಿಗೆ ಆತುರ.

ಗಾಂಧೀ ಮಹಾರಾಜಕೀ ಜೈ !

ಭಾರತಮಾತಾಕೀ ಜೈ !

ಇನ್‌ಕಿಲಾಬ್ ಝಿಂದಾಬಾದ್ !

ಮಾಧವನು ಕಿಟಕಿಗೆ ಧಾವಿಸಬೇಕೆಂದನು. ಮಗನ ಮುಖವನ್ನು ನೋಡಲೇಬೇಕು. ಇಂದು ಸಂಜೆಯವರೆಗೆ ಎಲ್ಲ ಕಾರ್ಯಕ್ರಮಗಳನ್ನು ತೀರಿಸಿಕೊಂಡು ರಾತ್ರಿಯಲ್ಲಿಯೆ ಮನೆಗೆ ಬರುವನು ತನ್ನ ಹುಡುಗ. ಅಷ್ಟರಲ್ಲಿ ತನಗೆ ನಿದ್ರೆ ಹತ್ತಬಹುದಾಗಿದೆ. ಮನಸ್ಸಿನ ಈ ಸ್ಥಿತಿಯಲ್ಲಿ ಮಗನ ಮುಖವನ್ನು ನೋಡದಿದ್ದರೆ ಸಮಾಧಾನವಾಗುವಂತಿಲ್ಲ. ಹೆದರಿಕೆ ಹೆಚ್ಚಾಗುವುದು—

ಹಿಂದುಸ್ತಾನ್ ಝಿಂದಾಬಾದ್ !

ಮಾಧವನು ಆಯಾಸದ ಪರಿವೆ ಇಲ್ಲದೆ ಕುರ್ಚಿಯನ್ನು ಕಿಟಕಿಗೆ ತೀರ ಹತ್ತಿರ ಎಳೆದು ಮುಖವನ್ನು ಕಿಟಕಿಯ ಹೊರಗೆ ಚಾಚಿದನು.

ಕಾಳಿದಾಸನು ಹೇಳುವಂತೆ ಮಾಧವನ ಎಲ್ಲ ಇಂದ್ರಿಯಶಕ್ತಿಗಳೂ ಕಣ್ಣೊಳಗೆ ಸೇರಿಕೊಂಡಂತಾಯಿತು.

‡ ‡ ‡ ‡

## ೨. +ಮೋಕ್ಷ

೧೨

ಮುಂಜಾವಿನ ಹತ್ತುಗಂಟೆಯ ಸಮಯ. ಪರೇಳ (ಮುಂಬಯಿ) ಭಾಗದ ಒಂದು ಬದಿಯ ಬೀದಿಯಲ್ಲಿ ಮೂರನೆಯ ಅಂತಸ್ತಿನ ಒಂದು ಕೋಣೆಯಲ್ಲಿ ಶ್ರೀಧರನು ಕುಳಿತಿದ್ದಾನೆ. ಆಕಾಶಕ್ಕೆ ಸಮೀಪವೆನ್ನಿಸಿದಂತಿದ್ದರೂ ಈ ಕೋಣೆಗೆ ಬಿಸಿಲಿನ ಮತ್ತು ಗಾಳಿಯ ಸಂಪರ್ಕವಿದ್ದಿರಲಿಲ್ಲ. ಯಾಕೆಂದರೆ, ಎಲ್ಲ ಕಡೆಗಳಿಂದಲೂ ಅದೇ ಮಾದರಿಯ ೨೦-೩೦ ಕೋಣೆಗಳಿಂದ ಸುತ್ತುಗಟ್ಟಲ್ಪಟ್ಟಿತ್ತು ಶ್ರೀಧರನ ಕೋಣೆ. ಸಾಲಾದ ಕೋಣೆಗಳ ಮುಂಭಾಗದ ವ್ಹರಾಂಡಾದಲ್ಲಿ ಇದ್ದ ಮೂರು ಮೊಳ ಜಾಗೆ ತುಳಸಿ, ಹೂಬಳ್ಳಿ ಮೊದಲಾದವುಗಳನ್ನುಳ್ಳ ಕುಂಡೆಗಳಿಂದ ಆಕ್ರಮಿಸಲ್ಪಟ್ಟಿದ್ದು ಯಾವಾಗಲೂ ಹಸಿ ಮಣ್ಣಿನ ವಾಸನೆಯಿಂದ, ಹೊರಸೂಸುವ ನೀರಿನಿಂದ ಕಲುಷಿತವಾಗಿರುತ್ತಿದ್ದಿತು. ಇಂದಿನ ಅವಸ್ಥೆಯನ್ನಂತೂ ಹೇಳುವಂತೆಯೆ ಇಲ್ಲ. ಆಗಸ್ಟ ೧೫. ಸ್ವಾತಂತ್ರ್ಯದ ದಿನ. ಎಂದರೆ, ಸಾವಿರಾರು ಚಿಕ್ಕಮಕ್ಕಳಿಂದ ಈ ವ್ಹರಾಂಡಾದ ಜಾಗೆ ಮುಕರಲ್ಪಟ್ಟಿತ್ತು. ಚೀರಾಟ, ಕೂಗಾಟ. ಬಡಿದಾಟ ಅಳು-ನಗೆ ಇವುಗಳ ಕರ್ಕಶ ಚೀತ್ಕಾರದಿಂದ ತನ್ನ ಮಾತು ತನಗೆ ಕೇಳಿಸುವಂತಿರಲಿಲ್ಲ. ಶ್ರೀಧರನು ಬೆಳಗಿನಿಂದಲೂ ಕೋಣೆಯಲ್ಲಿಯೆ ಇದ್ದಾನೆ. ಕೋಣೆಯ ಒಳಕ್ಕೆ ನೋಡಿದರೆ ಹೊರಗಿನ ಅವ್ಯವಸ್ಥೆಯ, ಹೊಲಸಿನ ಕಲ್ಪನೆ ಕೂಡ ಬರುವಂತಿಲ್ಲ. ಇಂದು ಹೊರಗೆ ಹೋಗಲೇಬಾರದೆಂದು ಶ್ರೀಧರನ ಹಟ. ಹೊರಗೆ ಉತ್ಸವವಿದೆ. ಯಾತಕ್ಕಾಗಿ ? ಸ್ವಾತಂತ್ರ್ಯ ಸಿಕ್ಕಿತೆಂದು. ಯಾರಿಗೆ? ಸ್ವಾತಂತ್ರ್ಯ ಸಿಕ್ಕುದು ಯಾ ರಿ ಗೆ ? ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವೆ ಇಲ್ಲ. ಇಪ್ಪತ್ತೇಳು ವರ್ಷ ಸ್ವಾತಂತ್ರ್ಯಯುದ್ಧ ನಡೆಯಿತು. ಸ್ವಾತಂತ್ರ್ಯವೆಂದರೆ ರಾಮರಾಜ್ಯ, ಎಲ್ಲರಿಗೂ ಸುಖದ ಅಧಿಕಾರ ಮತ್ತು ಅವಕಾಶ, ಬಡ ರೈತನಿಗೆ ಸೆರೆ-ಸಾಲಗಳಿಂದ ಮುಕ್ತತೆ. ಜಾತೀಯ ಐಕ್ಯ- ಎಂದು ಪ್ರಾರಂಭದಲ್ಲಿಯೆ ಸಾರಿದ್ದಿಲ್ಲವೆ ? ಆ ಸ್ವಾತಂತ್ರ್ಯ, ಆ ರಾಮರಾಜ್ಯ ಬಂದಿದೆಯೆ ? ಹಾಗಾದರೆ ಉತ್ಸವ ಯಾರಿಗಾಗಿ ? ಶ್ರೀಧರನು ತನ್ನ ಕೋಣೆಯ ಬಾಗಿಲನ್ನು ಮೆಲ್ಲಗೆ ತೆರೆದು ಒಂದೆರಡು ನಿಮಿಷ ಹೊರಗೆ ನೋಡಿದನು.

ಎಂತಹ ದೃಶ್ಯ ! ಬಡತನ, ಬಳಲಿಕೆ, ವ್ಯಸನ, ರೋಗ–ಇವುಗಳ ಸಂಗ್ರಹಾಲಯದಂತಿದೆ ತಾನಿದ್ದುಕೊಂಡ ಭವ್ಯ ವಸತಿ. ಬಡವರಿದ್ದಾರೆ, ಠಕ್ಕರಿದ್ದಾರೆ, ಸೂಳೆಯರಿದ್ದಾರೆ, ಸುಲಿಗೆಗಾರರಿದ್ದಾರೆ—ಇಂತಹದಾವುದಕ್ಕೂ ಧೈರ್ಯವಿಲ್ಲದ ನರಪಸುಗಳೂ ಇದ್ದಾರೆ ! ಪಶುಗಳಲ್ಲದೆ ಮತ್ತೇನು ? ಮಲ–ಮೂತ್ರಗಳ ಮಗ್ಗುಗಲ್ಲಿ ಸ್ವಚ್ಛಂದವಾಗಿ ವಾಸಮಾಡುವವರು ಮನುಷ್ಯರೆನ್ನಿಸಿಕೊಂಡಾರೆಯೆ ?....ಶ್ರೀಧರನು ಬಾಗಿಲನ್ನು ಮುಚ್ಚಿ ಬಂದು ತನ್ನ ಮಂಚದ ಮೇಲೆ ಕುಳಿತುಕೊಂಡನು....ತಾನಿಲ್ಲಿಗೆ ಬಂದು ಎಷ್ಟು ವರ್ಷಗಳಾದುವು ? ಸರಿಯಾಗಿ ಅಯ್ದು ವರ್ಷ, ೮ ದಿವಸ. ತಾನು ಬಂದದ್ದು ೧೯೪೨ರ ಅಗಸ್ಟ ೭ನೆಯ ತಾರೀಖಿಗೆ. ಆ ಸಮಯವನ್ನು ಮರೆಯುವಂತಿಲ್ಲ. ಇತಿಹಾಸದಲ್ಲಿಯೆ ಚಿರಸ್ಮರಣೀಯವಾಯಿತು ಆ ಪ್ರಸಂಗ....ಶ್ರೀಧರನು ತಿರಸ್ಕಾರದಿಂದ ಮೂಗು ಏರಿಸಿದನು....ಮುಂದಾಳುಗಳೆಲ್ಲ ಮನಬಂದಂತೆ ಮಾತನಾಡಿದರು, ಜನತೆಯ ಭಾವನೆಯನ್ನು ಕೆರಳಿಸಿದರು, ಬೆಳಗಾಗುವುದರೊಳಗೆ ಸದ್ದಿಲ್ಲದೆ, ಸಂಘಟಿತ ಯೋಜನೆ ಇಲ್ಲದೆ 'ಶಾಂತ'ರೀತಿಯಿಂದ ಪೋಲೀಸ ಅಧಿಕಾರಿಗಳನ್ನು ಹಿಂಬಾಲಿಸಿ ತಂತಮ್ಮ ಪಾಲಿಗೆ ಬಂದ ಜೇಲಿಗೆ ಹೋದರು ! ....ಹುಂ !....ಅದೆಂತಹ ಐತಿಹಾಸಿಕ ಘಟನೆಯೊ ?....ಮದ್ಯದ ಅಮಲಿನಲ್ಲಿದ್ದವನಂತೆ ಜನತೆ ಒಂದೆರಡು ವಾರ ಹುಚ್ಚೆದ್ದು ಕುಣಿಯಿತು, ಕೂಡಲೆ ಅಮಲು ಇಳಿದವನಂತೆ ನಿರ್ವಿಣ್ಣವಾಗಿ ಹಾಸಿಗೆ ಹಿಡಿಯಿತು. ದೂರದೃಷ್ಟಿ ಇಲ್ಲದ ಮುಂದಾಳುತನದ ಫಲವನ್ನು ಉಂಡು, ಈಗ ಅದನ್ನು ಮರೆಯುವ ಹಟದಿಂದ ಉತ್ಸವ ಮಾಡಬೇಕೆಂದಿರುವರೊ ಏನೊ ?....ಸ್ವಾತಂತ್ರ್ಯ.... ಅಲ್ಲ, ಆತ್ಮವಂಚನೆ....ಬ್ರಿಟಿಶರು ಹೆಚ್ಚು ಪ್ರಾಮಾಣಿಕರು. ಇಂದಿನದು transfer of power ( ಅಧಿಕಾರದ ಹಸ್ತಾಂತರ ) ಎಂದಿದ್ದಾರೆ. ಅದೀಗ ನಿಜವಾದ ಮಾತು. ಬ್ರಿಟಿಶರ ಕೈಯಲ್ಲಿದ್ದ ಅಧಿಕಾರ ನಮ್ಮವರ, ರಾಜಕೀಯ ಮುಂದಾಳುಗಳ, ಕಾಂಗ್ರೆಸ ಪಕ್ಷದ ಹಿರಿಯರ ಕೈಯಲ್ಲಿ ಬಂದಿದೆ, ಇಷ್ಟೆ. ಇನ್ನೊಬ್ಬರ ಸಾಮಾನ್ಯರ ಸಂಬಂಧವೆ ಇಲ್ಲ ಈ ಘಟನೆಯಲ್ಲಿ....ಉತ್ಸವ ?....ಯಾತಕ್ಕಾಗಿ ? ಹಿಂದುಸ್ಥಾನ ಎರಡು ತುಂಡಾಯಿತೆಂದೆ ?—ಹಿಂದೀ ಲಕ್ಷಾಧೀಶರ ರಾಜ್ಯ ಸ್ಥಾಪಿತವಾಯಿತೆಂದೆ?—ಶ್ರೀಧರನಿಗೆ ಇಂದಿನ ಉತ್ಸವದಲ್ಲಿ ಭಾಗ ವಹಿಸಬೇಕೆಂಬ ಮನಸ್ಸೇ ಇರಲಿಲ್ಲ....

ಇಂದು ಇಡಿಯ ದಿನ ಹೊರಗೆ ಹೋಗಬಾರದೆಂದೇ ನಿರ್ಧರಿಸಿದ್ದನು. ಆದರೆ ಅನಿವಾರ್ಯವಾಯಿತು. ತನಗೆ ಅನೇಕ ವರ್ಷಗಳಿಂದ ಅತ್ಯಂತ ಪ್ರಿಯನಾದ ಮಾಧವನ ಸಲುವಾಗಿ ಇಂದು ಅವನಿಗೆ ಹೊರಬೀಳಲೇಬೇಕಾಗಿದೆ. ಪಾಪ! ಮಾಧವ! ಅವನನ್ನು ನೆನೆದಾಗೊಮ್ಮೆ ಕನಿಕರವೆನಿಸುತ್ತಿತ್ತು ಶ್ರೀಧರನಿಗೆ, ಅವನನ್ನು ಕಂಡಾಗೊಮ್ಮೆ ಹೃದಯ ಕುದಿಯುತ್ತಿದ್ದುದು ಶ್ರೀಧರನದು.... ಇಂದು ಸಂಜೆಯ ಆರು ಗಂಟೆಗೆ ಮಾಧವನನ್ನು ಕಾಣುವ ವಚನ ಕೊಟ್ಟಿದ್ದಾನೆ. ಹೋಗಲೇಬೇಕು, ಅನಿವಾರ್ಯವಾಗಿ ಹೊರಬೀಳಲೇಬೇಕು. ಇಲ್ಲವಾದರೆ ಮೊದಲೇ ಬೇನೆಯಿಂದ ಬಳಲುವ ಮಾಧವನ ಮನಸ್ಸಿಗೆ ನಿರಾಶೆಯ ನೋವೂ ಉಂಟಾಗುವುದು. ಮಾಧವ! ಇಂದಿನ ಸ್ವಾತಂತ್ರ್ಯೋತ್ಸವವನ್ನು ಅಣಕಿಸುವ ಮೂರ್ತಿ! ಇಪ್ಪತ್ತೇಳು ವರ್ಷಗಳ ಅವನತಿಮುಖವಾದ ಸ್ವಾತಂತ್ರ್ಯ ಚಳವಳದ ಮೂರ್ತಿ! ೧೯೨೦ರ ಚಳವಳ, ೧೯೨೦ರ ಮಾಧವ; ಇಂದಿನ ಮಾಧವನ ಗತಿ ಏನು? ಸ್ವಾತಂತ್ರ್ಯ ಚಳವಳದ ಗತಿಯೂ ಅದೇ.

. . . .

೧೯೨೦ರ ಮಾಧವ! ಆ ಬುದ್ಧಿಮತ್ತೆ, ಆ ಗಾಂಭೀರ್ಯ—ತನ್ನ ಎಳೆ ವಯಸ್ಸಿನ ಹೃದಯದ ಮೇಲೆ ಮೂಡಿದ ಮಾಧವನ ಸಂಸ್ಕಾರವನ್ನು ಶ್ರೀಧರನು ಎಂದಿಗೂ ಮರೆಯುವಂತಿರಲಿಲ್ಲ. ಅದರಲ್ಲಂತೂ ಕಾಲೇಜದ ಬಹಿಷ್ಕಾರದ ಪ್ರಶ್ನೆಯನ್ನು ಮಾಧವನು ಎಲ್ಲರನ್ನು ಬಿಟ್ಟು ತನ್ನೊಡನೆ ಚರ್ಚಿಸುವನೆಂದು ಆಗ ಶ್ರೀಧರನಿಗೆ ಒಳಗಿಂದೊಳಗೆಯೆ ಹೆಮ್ಮೆ. ಆದರೆ ಆ ಸುಖಾನುಭವ ಉಳಿಯಲಿಲ್ಲ, ಉಳಿಯುವುದೂ ಶಕ್ಯವಿರಲಿಲ್ಲೆಂದು ಶ್ರೀಧರನು ಚರ್ಚೆಯ ಮೊದಲ ದಿನದಿಂದಲೇ ಕಂಡಿದ್ದನು. ಅಸಹಕಾರ ಶ್ರೀಧರನ ಮನಸ್ಸನ್ನು ಹಿಡಿಯಲಿಲ್ಲ. ಜನತೆಯ ಬಗ್ಗೆ ಮಾಧವನಿಗಿದ್ದ ವಿಶ್ವಾಸವು ಶ್ರೀಧರನಿಗಿರಲಿಲ್ಲ. "ದೇಶವು ನಮ್ಮನ್ನು ದುರ್ಬಲರನ್ನಾಗಿ ಮಾಡಿದೆ" ಎಂದು ಶ್ರೀಧರನು ನುಡಿದಾಗ ಮಾಧವನಿಗೆ ನಿರಾಸೆಯಾಗಿತ್ತು, ಮನ ನೊಂದಿತ್ತು.

"ದೇಶ–ದೇಶ–ದೇಶ! ದೇಶವೆಂದರೇನು?" ಎಂದು ಮಾಧವನು ಸಹನೆಯನ್ನು ಬಿಟ್ಟು ಕೇಳಿದನು.

"ದೇಶ ಎಂದರೆ ಭಾವನೆ, ದೇಶ ಎಂದರೆ ಸಂಪ್ರದಾಯ" ಎಂದು ಶ್ರೀಧರನು ಉತ್ತರಿಸಿದನು.

ತನ್ನ ಉತ್ತರವಾಗಲಿ, ಅದರ ಹಿನ್ನೆಲೆಯಾಗಿದ್ದ ವಿಚಾರಸರಣಿಯಾಗಲಿ ಮಾಧವನಿಗೆ ಒಪ್ಪಿಗೆಯಾಗಲಿಲ್ಲ ಎಂದು ಕಂಡು ಶ್ರೀಧರನು ವಾದವನ್ನು ಬೆಳೆಯಿಸಲು ಸಿದ್ಧನಿರಲಿಲ್ಲ. ಆದರೆ ಮಾಧವನಿಗೆ ಸೋತಂತೆನ್ನಿಸಿತ್ತಾದ್ದರಿಂದ ವಾದವನ್ನು ಮುಗಿಸಲು ಅವನು ಸಿದ್ಧನಿರಲಿಲ್ಲ.

"ಭಾವನೆ ಅಥವಾ ಸಂಪ್ರದಾಯ ಎಂದರೆ ನಾವು ಭಾವನೆಯಿಂದ ಇಲ್ಲವೆ ಸಂಪ್ರದಾಯದಿಂದ ಹೇಡಿಗಳಾಗಿದ್ದೇವೆ—ಎಂದು ನಿನ್ನ ಅಭಿಪ್ರಾಯವೆ ?" ತುಸು ಸಿಟ್ಟಿನಿಂದಲೆ ಕೇಳಿದ ಮಾಧವ.

"ಅಹುದು"

"ಹಾಗಾದರೆ—"

"ಭಾವನೆಯನ್ನು ಬಿಡಬೇಕು, ಸಂಪ್ರದಾಯವನ್ನು ಕಿತ್ತೊಗೆಯಬೇಕು."

ಶ್ರೀಧರನ ಈ ಖಂಡತುಂಡ ಉತ್ತರದಿಂದ ಮಾಧವನು ಇನ್ನಿಷ್ಟು ಕನಲಿದನು.

"ಆ ಮಾತಿನ ಅರ್ಥ—?" ಎಂದು ಆಹ್ವಾನಿಸುವವನಂತೆ ಕೇಳಿದನು ಮಾಧವ.

"ಕಲಿತವರನ್ನು ಬಿಟ್ಟು ಸಾಮಾನ್ಯರನ್ನು ಸಜ್ಜುಗೊಳಿಸಿ ಬ್ರಿಟಿಶರ ವಿರುದ್ಧ ಬಂಡನ್ನು ಹೂಡಬೇಕು. ಎಂದರೆ ಮಾತ್ರ ಸ್ವರಾಜ್ಯ ಶಕ್ಯ."

"ಓಹೊ! ಹಹ!" ಮಾಧವನ ದನಿಯಲ್ಲಿ ತಿರಸ್ಕಾರವಿದ್ದಿತು. "ಅಂತೂ ಕಾಲೇಜನ್ನು ಬಿಡಬಾರದು ಎನ್ನುವುದಕ್ಕೆ ಎಷ್ಟು ಸುತ್ತು ಸುತ್ತು ಸುಳಿದಾಡಿ ವಾದಿಸುವೆಯಲ್ಲ, ಅಂ? ಶ್ರೀಧರಾ?"

"ಕಾಲೇಜನ್ನು ನಾನು ಬಿಡಲು ಮೊದಲೇ ನಿರ್ಧರಿಸಿದ್ದೇನೆ—ಎಂದು ಹೇಳಲಿಲ್ಲವೆ?" ಶ್ರೀಧರನ ದನಿಯೂ ಎತ್ತರಕ್ಕೆ ಏರಿತ್ತು.

"ಅಂದರೆ? ಸಾಮಾನ್ಯರನ್ನು ಸಜ್ಜುಗೊಳಿಸುವುದೆಂದರೆ?"

"ಸಾಮಾನ್ಯರನ್ನು ಸಜ್ಜುಗೊಳಿಸುವುದಕ್ಕಾಗಿಯೆ ನಾನು ಕಾಲೇಜನ್ನು ಬಿಡುತ್ತಿದ್ದೇನೆ."

"ಅಂತೂ ನಿನ್ನಂತಹ ಕಲಿತವರೆ ಮುಂದಾಗಬೇಕಾಯಿತಲ್ಲ ?"

"ಮಾಧೂ. ವಾದಿಸಿ ಉಪಯೋಗವಿಲ್ಲ. ನಿನ್ನ ಅಭಿಪ್ರಾಯ ನೀನು ನಿಶ್ಚಿತಗೊಳಿಸಿರುವೆ, ನನ್ನ ಅಭಿಪ್ರಾಯ ನಾನು ನಿಶ್ಚಿತಗೊಳಿಸಿರುವೆ. ಆದ್ದರಿಂದ ವಾದ ನಿಲ್ಲಿಸೋಣ."

ಅಂತೂ ವಾದ ನಿಂತಿತು, ಪರಸ್ಪರ ಆದರಬುದ್ಧಿ, ಸ್ನೇಹ ಉಳಿದುವು, ನಿಜ. ಆದರೆ ವಾದ ನಿಲ್ಲಿಸಿದ್ದು ಒಂದು ದೃಷ್ಟಿಯಿಂದ ಅಯೋಗ್ಯವಾಯಿತೆಂದು ಶ್ರೀಧರನಿಗೆ ಮುಂದೆ ಹಳಹಳಿಯಾಯಿತು. ಅಂದು ವಾದ ಬೆಳೆದಿದ್ದರೆ ಮಾಧವನ ಮನಸ್ಸನ್ನು ಬದಲಾಯಿಸಿ, ಮುಂದಾದ ಅನವಶ್ಯಕಯಾತನೆಗಳನ್ನು ತಪ್ಪಿಸಬಹುದಾಗಿತ್ತೇನೊ—ಎಂದು ಶ್ರೀಧರನಿಗೆ ಸಂದೇಹವಿದ್ದಿತು. ಕ್ರಮೇಣ ಅನುಭವದಿಂದ ತನ್ನ ವಾದವೆ ಸರಿಯಾದದ್ದು ಎಂದು ಶ್ರೀಧರನಿಗೆ ಕಂಡುಬಂದಿತು. ವಕೀಲರು–ವಿದ್ಯಾರ್ಥಿಗಳು–ಬಿರುದಿನ ಬೊಂಬೆಗಳು–ಸರಕಾರೀ ಹುದ್ದೆದಾರರು—ಇವರನ್ನು ಕಟ್ಟಿಕೊಂಡು ಸ್ವಾತಂತ್ರ್ಯ ಚಳವಳ ಮುಂದಾಗಬಹುದೆ ? ಇವರೆಲ್ಲರೂ ಇಂಗ್ಲಿಶ–ಶಿಕ್ಷಿತರು. ಇವರೆಲ್ಲರಿಗೂ ಇಂಗ್ಲಿಶ ಶಿಕ್ಷಣ, ಇಂಗ್ಲಿಶ ಸರಕಾರ—ಇವುಗಳಿಂದಲೆ ಅಸ್ತಿತ್ವವಿದೆ, ಸುರಕ್ಷಿತತೆ ಇದೆ, ಪೋಷಣೆ ಇದೆ. ಇಂಗ್ಲಿಶ ಸರಕಾರದ ವಿರುದ್ಧ ಇವರು ಬಂಡನ್ನು ಹೂಡಬಹುದೆ ? ತಮ್ಮ ಕಾಲ ಮೇಲೆ ತಾವೇ ಕಲ್ಲನ್ನು ಒಗೆದುಕೊಳ್ಳಬಹುದೆ ? ಒಂದು ವೇಳೆ ಇವರು ಬಂಡನ್ನು ಹೂಡುವುದಾದರೆ ತಮ್ಮ ಅಸ್ತಿತ್ವ–ಸುರಕ್ಷಣೆ–ಪೋಷಣೆ ಇವುಗಳ ವ್ಯವಸ್ಥೆಯನ್ನು ಮಾಡಿಕೊಂಡ ಮೇಲೆ !

. . . . .

ಶ್ರೀಧರನ ಮುಖದ ಮೇಲೆ ಮುಗುಳ್ನಗೆ ಮೂಡಿತು. Transfer t power ! ಕೊನೆಗೆ ಅದೇ ಸ್ವಾತಂತ್ರ್ಯವಾಯಿತು. ವಕೀಲರು–ವಿದ್ಯಾರ್ಥಿಗಳು–ಬಿರುದಿನ ಬೊಂಬೆಗಳು–ಸರಕಾರೀ ಹುದ್ದೆದಾರರು ಇವರ ಕೈಯಲ್ಲಿ ಅಧಿಕಾರ ಬಂದುದು ಸ್ವಾತಂತ್ರ್ಯ, ಅದಕಾಗಿ ಇಂದು ಉತ್ಸವ ! ದೇಶದ ಚಳವಳದಲ್ಲಿ ಶಕ್ತಿಯನ್ನೂ ಆಯುಷ್ಯವನ್ನೂ ಹಾಳುಮಾಡಿಕೊಂಡ ಮಾಧವನಿಗೆ ತಿನ್ನಲು ತುತ್ತನ್ನು ಕೊಡದ ನಿರುದ್ಯೋಗ; ಅದೇ ಚಳವಳದ ಸಮಯಕ್ಕೆ ಇಂಗ್ಲಂಡಿಗೆ ಹೋಗಿ, I. C. S ಆಗಿ, ತನ್ನವರಿಂದಲೆ ದೂರಾದ ಅನಂತನಿಗೆ ಪರದೇಶದ ರಾಯಭಾರಿತನದ ಹುದ್ದೆ ! ಇದು ಸ್ವಾತಂತ್ರ್ಯ, ಇದು

ಉತ್ಸವ! ನಿಸ್ವಾರ್ಥ ಬುದ್ಧಿಯುವರು ಧ್ಯೇಯ ಸಾಧಿಸಿ ಹಿಂದೆ ಉಳಿಯು ವುದು, ಸ್ವಾರ್ಥಸಾಧಕರು–ಹಿಂದೆ ನಮಗೆ ವಿರೋಧದಲ್ಲಿದ್ದವರು–ಈಗ ಮತ್ತೂ ಮುನ್ನುಗ್ಗುವುದು—ಇದನ್ನು ಇಂದು ನಾವು ವಿಜೃಂಭಣೆಯಿಂದ ನೆನೆಯಬೇಕು! ಛೆ! ತನಗೆ ಈ ದಿನ ಹೊರಗೆ ಹವೆಯನ್ನು ಕೂಡ ಉಸಿ ರಾಡಿಸಬಾರದೆಂಬಷ್ಟು ಅಸಹ್ಯವೆನ್ನಿಸಿದೆ. ಆದರೂ ಹೋಗಲೇಬೇಕು. ಮಾಧವ ನಿಗಾಗಿ ಇನ್ನೂ ಆದರವಿದೆ, ಮಾಧವನ ಬುದ್ಧಿಮತ್ತೆಗಾಗಿ ಇನ್ನೂ ಅಭಿಮಾನ ವಿದೆ, ಮಾಧವನ ಸ್ಮರಣೆ ಎಂದಿಗೂ ಇರುವುದು. ಯೋಗ್ಯತೆ ಮತ್ತು ಕೆಲಸ ಗಾರಿಕೆ! ಆದರೇನು ? ಅದರ ಸದುಪಯೋಗವಾಗಲಿಲ್ಲ.

. . . . .

“ ಮಾಧೂ, ನಿನ್ನ ಬುದ್ಧಿಮತ್ತೆಯ ದುರುಪಯೋಗವಿದು ” ಎಂದನು ಶ್ರೀಧರ.

ಮಾಧವನು ಆ ದಿನ ಶ್ರೀಧರನ ಊರಿಗೆ ಬಂದಿದ್ದನು. ಸಾಯಂಕಾಲ ಸಭೆಯಾಗಿತ್ತು. ಶ್ರೀಧರನು ಮಾಧವನ ಭಾಷಣವನ್ನು ಕೇಳಿದ್ದನು, ಮೆಚ್ಚಿ ದ್ದನು. ಮನೆಗೆ ಹಿಂದಿರುಗುವಾಗ ಇಬ್ಬರೂ ಗೆಳೆಯರು ಮಾತನಾಡುತ್ತ ಬಂದಿದ್ದರು. ಈ ಉಪನ್ಯಾಸಗಳಿಂದ ಎಳ್ಳಷ್ಟೂ ಲಾಭವಿಲ್ಲ ಎಂದು ಶ್ರೀಧರನು ತನ್ನ ಅಭಿಪ್ರಾಯವನ್ನು ಹೇಳಿದ್ದನು.

“ ಹಾಗಾದರೆ ಬಿ. ಎ. ಪಾಸಾಗಿ ಸರಕಾರೀ ನೋಕರಿಯಲ್ಲಿ ಸೇರಿದ್ದರೆ ಲಾಭವಾಗುತ್ತಿತ್ತೇನೊ ನನ್ನ ಬುದ್ಧಿಮತ್ತೆಯದು ” ಎಂದು ನಗೆಯಾಡಿದನು ಮಾಧವ.

“ ಅದು ನಿರುಪಯೋಗ ಎಂದರೆ, ಇದು ಸದುಪಯೋಗ ಎಂದಂತಾಗ ಲಿಲ್ಲ, ಮಾಧೂ.”

ಮಾಧವನು ನಗೆಯಿಂದಲೆ ಮಾತನಾಡಿದನು. “ ಶ್ರೀಧರಾ, ನಿನ್ನ ಭಾಗ್ಯ ನನಗಿದ್ದರೆ ನಿನ್ನಂತೆ ನಾನೂ ಕಾಲೇಜನ್ನು ಬಿಟ್ಟು ಸ್ವಂತದ ಗ್ರಂಥ ಸಂಗ್ರಹವನ್ನು ಮಾಡಿಕೊಂಡು ಜ್ಞಾನಸಂಪಾದನೆ ಮಾಡಬಹುದಾಗಿತ್ತು.”

“ ನನ್ನ ಗ್ರಂಥಸಂಗ್ರಹ ನಿನ್ನದೆ ಎಂದು ತಿಳಿ. ಮಾಧೂ, ಅಲ್ಲಿ ಕುಳಿತು ಓದುವಾಗ ಯಾವಾಗಲೂ ನಿನ್ನದೆ ಸ್ಮರಣೆ ನನಗೆ. ನನ್ನೊಡನೆ ಮಾಧವ ನಿದ್ದಿದ್ದರೆ ಇವನ್ನೆಲ್ಲ ಓದಿ ತಿಳಿದುಕೊಳ್ಳಲು ಎಷ್ಟು ಸುಲಭವಾಗಬಹುದಾಗಿತ್ತು

ಎಂದು ಯಾವಾಗಲೂ ನನ್ನ ಎಣಿಕೆ. ಮಾಧೂ ಈಗಲಾದರೂ ಏನಾಯಿತು? ನೀನು ನನ್ನ ಅಣ್ಣನಾಗಿ ನನ್ನಲ್ಲಿಯೆ ಇದ್ದುಕೊ—" ಶ್ರೀಧರನಿಗೆ ಒಳಗೆ ಕಳವಳವಾಯಿತು—" ಸಂದರ್ಭ ಒದಗಿತೆಂದು ಹೇಳಿದ್ದೇನೆ, ವಿಚಾರಮಾಡು."

ಇಬ್ಬರೂ ಗೆಳೆಯರು ಕೈಯಲ್ಲಿ ಕೈಯಿಟ್ಟುಕೊಂಡು ಒಂದೂ ಮಾತನ್ನಾಡದೆ ಏಕಮನಸ್ಕರಾಗಿ ಮನೆಯವರೆಗೂ ಹಾಗೇ ನಡೆದರು.

ಆ ರಾತ್ರಿ ಊಟವಾದ ಮೇಲೆ ಮತ್ತೆ ಪ್ರಾರಂಭವಾಯಿತು ಚರ್ಚೆಗೆ. ಈಗ ಅದನ್ನು ಪ್ರಾರಂಭಿಸಿದವನು ಮಾಧವನು.

" ಚಳವಳಕ್ಕೆ ಪ್ರಚಾರ ಅಗತ್ಯ, ಪ್ರಚಾರಕ್ಕೆ ಉಪನ್ಯಾಸ ಅಗತ್ಯ; ಹೀಗಿದ್ದೂ ಇದೆಲ್ಲ ನನ್ನ ಬುದ್ಧಿಮತ್ತೆಯ ದುರುಪಯೋಗ ಎನ್ನುವೆಯಲ್ಲ?"

ಶ್ರೀಧರನು ಒಂದೆರಡು ನಿಮಿಷ ಮೌನದಿಂದಿದ್ದನು. ಆಮೇಲೆ ಅತ್ಯಂತ ವಿಚಾರಪೂರ್ವಕವಾಗಿ ಮಾತನಾಡುವವನಂತೆ ಸಾವಕಾಶವಾಗಿ ನುಡಿದನು.

" ನಿನ್ನ ಉಪನ್ಯಾಸಗಳನ್ನು ಕೇಳುವವರು ಯಾರು ? ಹಳ್ಳಿಯ ಸಾಮಾನ್ಯ ಜನರು. ಅವರಿಗೆ ಶಿಕ್ಷಣ ಇದೆಯೆ ? ಸಂಸ್ಕಾರ ಇದೆಯೆ ? ಹೊರ ಜಗತ್ತಿನ ಸಂಪರ್ಕ ಇದೆಯೆ ? ನಿನ್ನ ವಿಚಾರ ಅವರಿಗೆ ತಿಳಿಯುವುದಿಲ್ಲ, ಅದೂ ನಿನಗೆ ಗೊತ್ತು. ಅವರಿಗೆ ತಿಳಿಯಲಿ ಎಂಬ ಸದುದ್ದೇಶದಿಂದಲೆ ನೀನು ಸ್ವರಾಜ್ಯ ಎನ್ನುವ ಬದಲು 'ರಾಮರಾಜ್ಯ' ಎನ್ನುವೆ. ಮಾಧೂ, ನೀನೇ ನೋಡು. ಇದರ ಪರಿಣಾಮವೇನು ? ನಿನ್ನ ಧ್ಯೇಯ ಬೇರೆ, ಅವರ ಕಣ್ಣೆದುರು ನಿಲ್ಲುವ ಧ್ಯೇಯ ಬೇರೆ! ಸರಕಾರಕ್ಕೆ ಹೆದರಬೇಡಿರಿ ಎಂದು ಹೇಳುವ ನೀನೇ ನಾಳೆ ಅಂತಹ ಪ್ರಸಂಗ ಬಂದಿತೆಂದರೆ (ನನ್ನ ಮಾತನ್ನು ಕೇಳಿದರೆ ಬರುವುದಿಲ್ಲ)—ಬಂದಿತೆಂದರೆ ಶಾಂತರೀತಿಯಿಂದ ಆ ಪೋಲೀಸರೊಡನೆ ಹೋಗುವಿ.... ಇದರ ಪರಿಣಾಮವೇನಾಗುವುದು ಅವರ ಮೇಲೆ ? "

ಆದರೆ ಮಾಧವನದು ದೃಢನಿರ್ಧಾರವಾಗಿದ್ದಿತು. ಅವನು ಕೇಳಲಿಲ್ಲ. ಶ್ರೀಧರನಿಗೆ ಅತ್ಯಂತ ವಿಷಾದವಾಯಿತು. ಮುಂದೆ ಕೆಲವೇ ದಿನಗಳಲ್ಲಿ ತಾನು ಉದಾಹರಣೆಗೆಂದು ಕೊಟ್ಟಂತಹ ಪ್ರಸಂಗವೆ ಒದಗಿ ಮಾಧವನಿಗೆ ಒಂದು ವರ್ಷದ ಶಿಕ್ಷೆಯಾದಾಗ ಶ್ರೀಧರನು ತಾನೇ ಅಪರಾಧಿ ಎನ್ನುವವರ ಹಾಗೆ ಮನಸ್ತಾಪ ಮಾಡಿಕೊಂಡ.

. . . . .

ಶ್ರೀಧರನು ನಿಟ್ಟುಸಿರು ಬಿಟ್ಟು ಮಂಚದಿಂದ ಎದ್ದ. ತಲೆ ತುಂಬಿ ಮುನ್ನುಗ್ಗುವ ವಿಚಾರಗಳ ರಭಸವನ್ನು ತಡೆಯುವುದಕ್ಕೆಂದು ಕೋಣೆಯಲ್ಲಿ ಅತ್ತಿತ್ತ ಸುತ್ತಾಡತೊಡಗಿದ. ಕೊನೆಗೆ ಮೆಲ್ಲಗೆ ಬಾಗಿಲನ್ನು ತೆಗೆದ. ಹೊರಗೆ ಮಕ್ಕಳ ಕೂಗಾಟ ತಲೆನೋವನ್ನುಂಟುಮಾಡುವಷ್ಟು ಚೀತ್ಕಾರಕ್ಕೇರಿದೆ ! ಶ್ರೀಧರನು ಒಮ್ಮೆಲೆ ಬಾಗಿಲನ್ನು ಮುಚ್ಚಿ ಬೆನ್ನಿಗೆ ಕೈಕಟ್ಟಿಕೊಂಡು ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ನಡೆದ. ೧೯೪೭ನೆಯ ಇಸ್ವಿ ! ಸ್ವಾತಂತ್ರ್ಯದ ದಿನ ! ಆದರೂ ನಮ್ಮ ದೇಶದಲ್ಲಿ ಬಡವರ ಸ್ಥಿತಿ ಇನ್ನೂ ಇಷ್ಟು ಕೀಳಾಗಿದೆಯಲ್ಲವೆ? ತನ್ನ ಕೋಣೆಯಿಂದ ಹೊರಗೆ ಹೆಜ್ಜೆ ಇಟ್ಟೊಡನೆ ವೈತರಣಿಯ ಕೆಸರಿನಲ್ಲಿ ಕಾಲಿಟ್ಟಂತೆ ಎಂದು ಶ್ರೀಧರನ ಅಭಿಪ್ರಾಯವಿದ್ದಿತು. ಇದನ್ನು ಸುಧಾರಿಸುವುದಾದರೂ ಶಕ್ಯವೆ? ಮುಂಬಯಿಯು ಪ್ರಾಂತದ ರಾಜಧಾನಿ. ಕಟ್ಟಡಗಳು ತೋರಿಕೆಗೆ ಭವ್ಯವಿರಬೇಕು. ಸಾಕಲ್ಲವೆ ? ರಾಜಧಾನಿಯಲ್ಲಿ ರಾಜ್ಯಾಧಿಕಾರಕ್ಕೆ ಸ್ಥಾನ. ಮಿಕ್ಕವರ ಗೊಡವೆ ಯಾರಿಗೇನು ? ಕಾಣಲು ಭವ್ಯವಾದ ಕಟ್ಟಡ. ಒಳಗೆ ನೋಡಿದರೆ ಕಾಲು ಚಾಚಿ ಮಲಗಲು ಸಾಲದಷ್ಟು ಚಿಕ್ಕದಾದ ಕೋಣೆ. ಒಂದು ಕೋಣೆಯಲ್ಲಿ ಹತ್ತು-ಹನ್ನೆರಡು ಜನ. ಸಾಲುವುದು ಶಕ್ಯವೇ ಇಲ್ಲ. ಆದ್ದರಿಂದ ಕಟ್ಟಡದ ಅರ್ಧಕ್ಕೆ ಮಿಕ್ಕಿದ ಜನಸಂಖ್ಯೆ ವ್ಹರಾಂಡದಲ್ಲಿ. ಮುಗಿಯಿತು. ಹುಡುಗ–ಹಿರಿಯ–ಗಂಡು–ಹೆಣ್ಣು ಎಂಬ ಭೇದ ಮಾಡಲು ಸಾಕಷ್ಟು ಜಾಗೆ ಬೇಕಲ್ಲ ? ತುಸು ಬೆಳೆದ ಹುಡುಗರು ಇದಕ್ಕೆ ಬೇಸತ್ತು ರಾತ್ರಿ ಹೊರಗೆ ಅಲೆದಾಡುವರು; ನಿದ್ದೆಯ ಕಾಟ, ನಿರುದ್ಯೋಗ ತಪ್ಪಿಸಲು ಜೂಜಾಟ, ಜಗಳಾಟ, ಕಳವು—ಇಂತಹದರಲ್ಲಿ ತೊಡಗುವರು; ಹುಡುಗೆಯರೊ—ಸೂಳೆಗಾರಿಕೆ ಸುಲಭವಾದ ಉಪಾಯ, ಸಾಲದ ಮನೆ ತಪ್ಪಿಸಿ ರಾತ್ರಿ ಸುಖದ ಜಾಗೆಯನ್ನು ದೊರಕಿಸಿಕೊಳ್ಳಲಿಕ್ಕೆ. ಕೊನೆಗೆ ಯಾವಾಗಲಾದರೊಮ್ಮೆ ತಡೆಯದಂತಾಗಿ ಮುಷ್ಕರ ಹೂಡುವುದು; ಮುಂದೆ ಪಶ್ಚಾತ್ತಾಪದಿಂದ ಎಲ್ಲ ಕಷ್ಟ-ನಷ್ಟಗಳನ್ನು ಕುಂಯ್ ಎನ್ನದೆ ಸಹಿಸುವುದು ! ನಡೆದಿದೆ ಈ ಸಂಸಾರಚಕ್ರ. ಸಂಭವಾಮಿ ಯುಗೇ ಯುಗೇ—ಎಂಬ ಮಾತು ಈ ಪರಿಸ್ಥಿತಿಗೆ ಅನ್ವಯಿಸುವುದೇನೊ, ಪರಮಾತ್ಮನ ಅವತಾರಕ್ಕಲ್ಲ. ಯಾವ ಯುಗ ಬಂದರೂ ಇವರ ಹಣೆಬರಹ ಇದೇ....ಆದರೆ—ಆದರೆ—ತಾನೇಕೆ ಇದರಲ್ಲಿ ಬಿದ್ದುಕೊಳ್ಳಬೇಕಾಗಿತ್ತೊ—

ಎಂದು ಹಣೆಗೆ ಗಂಟುಕಟ್ಟಿದ ಶ್ರೀಧರ....ಈ ಹಾಳು, ಈ ಹೊಲಸು, ಈ ಹೊಲೆತನ—ಇವನ್ನರಿತೂ ತಾನೇಕೆ—? ಹಣೆಯ ಗಂಟು ಸಡಿಲಾಯಿತು. ಹೊಳೆಯಿತು ಶ್ರೀಧರನಿಗೆ ತಾನು ಯಾಕೆ ಈ ಉಪದ್ವ್ಯಾಪದಲ್ಲಿ ಸಿಕ್ಕಿಕೊಂಡ ನೆಂಬುದು. ಅದಕಾಗಿಯೆ ಅಲ್ಲವೆ ಈ ದಿನ ಮಾಧವನನ್ನು ಕಾಣಲೇಬೇಕು ಎನ್ನುವುದು. ಮತ್ತೆ ಯಾರನ್ನು ಕಾಣುವುದಾದರೂ ತಾನಿಂದು ಹೊರಬೀಳುತ್ತ ಲಿದ್ದಿಲ್ಲ....ಆದರೆ ಮಾಧವನಿಗಾಗಿ ತಾನು ಈ ತಪಸ್ಸನ್ನು ಕೈಕೊಂಡದ್ದು. ಮಾಧವನಿಗೆ ತನ್ನಿಂದ ಅನ್ಯಾಯವಾಗಿದೆ, ತಾನು ಮಾಧವನಿಗೆ ಅಪರಾಧಿ ಯಾಗಿದ್ದಾನೆ ಎಂಬ ಭಾವನೆಯಿಂದಲೆ ಶ್ರೀಧರನು—ಪ್ರಾಯಶ್ಚಿತ್ತ ಎಂದು —ಈ ದುಃಖದ ದಾರಿಯನ್ನು ಹಿಡಿದಿದ್ದ. ಉದ್ದವಾದ ಉಸಿರೊಂದನ್ನು ಬಿಟ್ಟು ಶ್ರೀಧರನು ನಿರ್ವಿಣ್ಣನಾದವನಂತೆ ಮಂಚದಲ್ಲಿ ಮುಖ ಮೇಲೆ ಮಾಡಿ ಕೊಂಡು ಮಲಗಿದ್ದನು. ಎರಡೂ ಅಂಗೈಗಳನ್ನು ತಲೆಯ ಕೆಳಗಿಟ್ಟು, ಎರಡೂ ಕಣ್ಣುಗಳನ್ನು ತೆರೆದು, ಮಾಳಿಗೆಯನ್ನು ಭೇದಿಸಿ ಮುಗಿಲನ್ನು ಮುಟ್ಟುವಂತಹ ದೃಷ್ಟಿಯಿಂದ ಒರಗಿಕೊಂಡನು.

. . . . .

೧೯೩೨ರ ಮಾರ್ಚ ೧೫–೧೬ರ ಸುಮಾರಿಗೆ. ಶ್ರೀಧರನಿಗೆ ಚನ್ನಾಗಿ ಸ್ಮರಣೆಯಲ್ಲಿದೆ. ಮಾರ್ಚ ೧೩ರ ದಿನ ಹೋಳೀಹುಣ್ಣಿವೆ. ಆ ದಿನ ಸರಕಾರವು ಮಹಾತ್ಮಾಗಾಂಧಿಯವರನ್ನು ಬಾಧಿಸಿತು. ತತ್‌ಕ್ಷಣವೆ ತಾನು ಮುಂಬಯಿ ಯಿಂದ ಹೊರಟು ಊರಿಗೆ ಬಂದೆನೆಂದು ಮಾಧವನು ಶ್ರೀಧರನಿಗೆ ಹೇಳಿದ್ದನು. ಆದ್ದರಿಂದ ಮಾರ್ಚ ೧೫–೧೬ರ ಸುಮಾರಿಗೇ ಮಾಧವನು ತನ್ನ ಕಡೆ ಬಂದದ್ದು. ಈ ಮಾಧವ ಯಾರು? ಶರೀರ ಬಾಡಿದೆ, ಗಲ್ಲ ಪಚ್ಚಾಗಿವೆ, ಕಣ್ಣು ಒಳನಟ್ಟವೆ, ಬೆನ್ನೂ ಬಾಗಿದೆ. ಶ್ರೀಧರನಿಗೆ ಕಳವಳವನ್ನು ತಡೆಯಲ ಶಕ್ಯವಾಯಿತು. "ಮಾಧವಾ, ಮಾಧೂ" ಎಂದವನೆ ಅವನ ಭುಜದ ಮೇಲೆ ಮುಖವನ್ನು ಮುಚ್ಚಿಕೊಂಡು ಬಿಕ್ಕಿದನು ತಾನು! ಶ್ರೀಧರ! ಮಾಧವನು ದುಃಖವನ್ನು ಹೊರಗೆಡುಹಲಾರದಷ್ಟು ನಿರ್ಬಲನಾಗಿದ್ದ ನೇನೊ! ಅವನ ಕಣ್ಣುಗಳಲ್ಲಿ ವೇದನೆ ಕಂಡಿತು, ನೀರು ಕಾಣಲಿಲ್ಲ. ಮಾಧ ವನು ತನ್ನ ಊರಿಗೆ, ತನ್ನ ಮನೆಗೆ ಮುಟ್ಟಿ ಕೂಡಲೆ ತನ್ನನ್ನು ಕಾಣಲು ಬಂದಿದ್ದನು....ಊಟ, ವಿಶ್ರಾಂತಿ ಆದ ಮೇಲೆ ಒಂದೆಡೆ ಕುಳಿತರು. ಎಷ್ಟೊತ್ತು

ಮಾತಿಲ್ಲದೆ ಕಳೆದಿದ್ದರೂ ಅವರ ಹೃದಯಗಳು ಇಷ್ಟರಲ್ಲಿಯೆ ಕ್ಷೇಮಸಮಾಚಾರದ ಮಾತನಾಡಿಕೊಂಡು ಮತ್ತೆ ಸಲುಗೆಯಿಂದ ಒಂದೆಡೆ ಸೇರಿವೆ ಎಂಬ ಕಳೆ ಇದ್ದಿತು ಇಬ್ಬರ ಮುಖದ ಮೇಲೂ. ತಾನು ಒಂದೇಸವನೆ ಮಾಧವನನ್ನು ನೋಡುತ್ತಿರುವಾಗ ಮಾಧವನೆ ನಗೆಯಿಂದ ಮಾತು ಮೊದಲ್ಮಾಡಿದನು.

" ಶ್ರೀಧರಾ, ಜೇಲಿಗೆ ಹೋಗಿ ಬಂದ ನೆವವಾದರೂ ಇದೆ ನನಗೆ ಆರೋಗ್ಯ ಕೆಡಲಿಕ್ಕೆ. ಕುಳಿತಲ್ಲಿಯೆ ಸೊರಗಿದ ನೀನು ನನ್ನನ್ನು ಹಾಗೆ ದಿಟ್ಟಿಸಿ ನೋಡಲು ಅರ್ಹನಲ್ಲ "

ತಾನು ಏನೆಂದು ಹೇಳುವುದು ? " ಮಾಧೂ, ಗಟ್ಟಿ ಮನಸ್ಸು ಮಾಡಿ ನಿನ್ನನ್ನು ಒಲಿಸಿಕೊಂಡಿದ್ದರೆ ನೀನು ಜೇಲಿಗೆ ಹೋಗುತ್ತಿರಲಿಲ್ಲ. ಆದ್ದರಿಂದ ನಿನ್ನನ್ನು ನಾನೇ ಜೇಲಿಗೆ ಕಳುಹಿಸಿದಂತಾಯಿತು. ಆ ಅಪರಾಧಕ್ಕೆ ಪ್ರಾಯಶ್ಚಿತ್ತವೆಂದು ಅವಿಶ್ರಾಂತವಾಗಿ ದುಡಿದಿರುವೆ, ಅದಕಾಗಿ ಸೊರಗಿರುವೆ" ಎಂದು ಹೇಳಿಬಿಡಬೇಕೆ? ಮಾತು ಸರಿಯಾದರೂ, ರೀತಿ ಸರಿಯಾಗಬಹುದೆ? ತಾನು ಅವಿಶ್ರಾಂತವಾಗಿ ದುಡಿದುದಾದರೂ ಏನು ? ರೈತರಿಗೆ ಓದಲು ಕಲಿಸಿದ್ದು. ಪರಿಶ್ರಮದ ಕೆಲಸವಲ್ಲ. ಕೂಲಿಯವರ ತಂಟೆ ಬಗೆಹರಿಸಿದ್ದು; ದೇಶದ ಸೇವೆಯಲ್ಲ. ಕಸಬುಗಾರರಿಗೆ ಸಂಘಟನೆಯ ಮಹತ್ತ್ವವನ್ನು ಸಂಘಟನೆಯನ್ನು ಮಾಡಿಯೆ ತೋರಿಸಿದ್ದು; ರಾಷ್ಟ್ರೀಯ ಚಳವಳವಲ್ಲ. ಯಾವ ದೊಡ್ಡ ಕೆಲಸವನ್ನು ತಾನು ಮಾಡಿದೆನೆಂದು ಹೇಳಿಕೊಳ್ಳಬೇಕು ? ಒಂದು ದಿನ ಸಂತೆಗೆ ಗಾಡಿಯನ್ನು ಹೊಡೆದುಕೊಂಡು ಹೋಗುವ ಹಳ್ಳಿಗನನ್ನು ಪೋಲೀಸನೊಬ್ಬನು ತಡೆದನು, ಹೊಡೆದನು; ಅದನ್ನು ನೋಡಿದ ಶ್ರೀಧರನು ಒಮ್ಮೆಲೆ ಧಾವಿಸಿ " ತಡೆಯುವ ಅಧಿಕಾರ ನಿನಗಿದೆ, ಹೊಡೆಯುವ ಅಧಿಕಾರ ನಿನಗಿಲ್ಲ; ಅವನ ಕ್ಷಮೆಯನ್ನಾದರೂ ಬೇಡು, ಇಲ್ಲವೆ ಫಿರ್ಯಾದವನ್ನು ಎದುರಿಸಲು ಸಿದ್ಧನಾಗು " ಎಂದದ್ದೂ ಆ ಪೋಲೀಸನು ಹಳ್ಳಿಗನಿಗೆ ಕ್ಷಮೆ ಬೇಡಿದ್ದೂ, ಮುಂದೆ ಕ್ರಮೇಣ ಅವರಿಗೆ ನಾಗರಿಕತೆಯ ಹಕ್ಕುಗಳನ್ನು ಕಲಿಸಿಕೊಟ್ಟದ್ದೂ—ಛೆ, ಇದು ಯಾವ ಮಹತ್ಕಾರ್ಯವೆಂದು ಮಾಧವನೆದುರು ಹೇಳುವುದು ? " ನಿನಗೆ ಕೇಳಿಕೊಂಡದ್ದು ಇಂತಹ ಕೆಲಸಕ್ಕಾಗಿ ಬುದ್ಧಿಯ ಸದುಪಯೋಗವನ್ನು ಮಾಡು ಎಂದು. ನೀನಿಲ್ಲದಕ್ಕಾಗಿ, ನಿನ್ನ

ವತಿಯಿಂದ ನಾನು ಮಾಡಿದೆ" ಎಂದಾದರೂ ಹೇಳಿಬಿಡೋಣವೆ—ಎನ್ನಿಸಿತು. ಆದರೆ ದೇಶಕ್ಕಾಗಿ ಜೇಲಿಗೆ ಹೋಗಿ ಆಯುರಾರೋಗ್ಯಗಳ ನಾಶವನ್ನು ಅನುಭೋಗಿಸಿದ ಗೆಳೆಯನಿಗೆ ಹೇಳುವಂತಹ ಮಹತ್ತ್ವದ ಕೆಲಸ ತನ್ನಿಂದ ಆಗಿಲ್ಲವಲ್ಲ—ಎಂದು ನೊಂದನು ಶ್ರೀಧರ. ವಿಚಿತ್ರವೆಂದರೆ ಮಾಡುವಾಗ ಇಂತಹ ಕೆಲಸ ಬಹಳ ಮಹತ್ತ್ವದ್ದೆಂದು ತೋರಿತ್ತು, ಮಾಧವನಿಗೆ ಹೇಳಲೇ ಬೇಕೆಂದೆನ್ನಿಸಿತ್ತು. ಈಗ ಎದುರಿನಲ್ಲಿಯೆ ಮಾಧವ ಕುಳಿತಾಗ ಹೇಳಬೇಕೆಂದರೆ ತಲೆಗೆ ತೋಚಲೊಲ್ಲದು, ನಾಲಗೆ ನುಡಿಯಲೊಲ್ಲದು.

"ಯಾಕೊ, ಶ್ರೀಧರಾ, ಯಾವಾಗ ಕೇಳಿದ ಪ್ರಶ್ನೆಗೆ ಈಗ ತಲೆ ಜಾಡಿಸುವೆಯಲ್ಲ ?"

"ಆಂ—"

ಶ್ರೀಧರನು ಎಚ್ಚೆತ್ತವನಂತೆ ದಿಟ್ಟಿಸಿ ನೋಡಿದನು. ನಗುವ ಮಾಧವನ ಮುಖ ಎದುರಿನಲ್ಲಿ.

"ಮಾಧವಾ, ಏನು ಮಾಡಿರುವೆನೊ ನನಗೇ ತಿಳಿಯದಂತಾಗಿದೆ."

"ಸರಿ. ಯೋಗ್ಯ ಗೆಳೆತನ. ಏನು ಮಾಡಬೇಕೆಂದು ನನಗ ತಿಳಿಯದಾಗಿದೆ."

"ಯಾಕೆ—ಏನು—ಅಲ್ಲ—ಚಳವಳಿ—" ಶ್ರೀಧರನು ಕೇಳಬೇಕೆಂಬ ಪ್ರಶ್ನೆಗೆ ಶಬ್ದಗಳಿ ದೊರೆತುವು ಹೊರತಾಗಿ ವಾಕ್ಯ ಪೂರ್ತಿಯಾಗಲಿಲ್ಲ.

ಏನನ್ನೂ ನುಡಿಯದೆ ಮಾಧವನು ಉಸುರ್ಗರೆದನು.

"ಎಂದೋ ನಿನ್ನ ಮಾತನ್ನು ಕೇಳಿದ್ದರೆ—ಎಂದೆನ್ನಿಸಿದೆ ನನಗೆ."

ಶ್ರೀಧರನ ಮುಖ ಒಮ್ಮೆಲೆ ಅರಳಿತು. "ಎಂದೊ ಯಾಕೆ ? ಈಗ ಲಾದರೂ—"

ಮಾಧವನು ವಿಷಾದದಿಂದ ತಲೆ ಅಲ್ಲಾಡಿಸಿದನು.

೧೩

. . . . .

ಆ ಗಳಿಗೆಯಲ್ಲಿ ತನಗಾದ ನಿರಾಶೆಯನ್ನು ಸ್ಮರಣೆಗೆ ತಂದುಕೊಂಡು ಶ್ರೀಧರನು ಈಗ ಕೂಡ ತಡೆಯದೆ ಕಣ್ಣುಮುಚ್ಚಿದನು. ರಾಷ್ಟ್ರದ ಇತಿಹಾಸ

ದಲ್ಲಿಯಂತೆ ಮನುಷ್ಯನ ಜೀವನದಲ್ಲಿ ಕೂಡ ಹೇಗೆ ಒಂದೇ ಒಂದು ಕ್ಷಣ ಇಡಿಯ ಭವಿತವ್ಯವನ್ನೆ ಬದಲಾಯಿಸಲು ನಿರ್ಣಾಯಕವಾಗುತ್ತಿದೆ! ಆ ದಿನ ಮಾಧವನು ತಲೆ ತೂಗಿದ್ದರೆ ಸಾಕು, ಇಂದು ತಾನು ಪರೇಳದ 'ಚಾಳ'ದಲ್ಲಿ ಬಂಧಿರುತ್ತಿರಲಿಲ್ಲ, ಮಾಧವನೂ ನಿರಂತರ ರೋಗಿಯಾಗುತ್ತಿರಲಿಲ್ಲ. ಈಗ ಲಾದರೂ ತನಗೆ ನಿಜವಾಗಿ ಈ 'ಚಾಳ'ದ ತಿಪ್ಪೆಯಲ್ಲಿ ಉರುಳಾಡುವ ದಗತ್ಯವಿದೆಯೆ? ಶ್ರೀಧರನು ಒಂದೊಂದಾಗಿ ನೆನೆದುಕೊಂಡನು; ಮನೆ, ತಾಯಿ, ಉತ್ಪನ್ನ, ದೊಡ್ಡ ಗ್ರಂಥಸಂಗ್ರಹ, ಶತ್ರುಗಳಿಲ್ಲ, ಸುತ್ತಲಿನ ಹಳ್ಳಿ ಗಳಲ್ಲಿ ಕೂಡ ಸನ್ಮಾನ, ಬಳಲಿಕೆ ಇಲ್ಲದ ಆರೋಗ್ಯ—ಇದೆಲ್ಲವನ್ನೂ ಬಿಟ್ಟು ತಾನು ಇಲ್ಲಿ ಬಂದು ಇದ್ದುದೇಕೆ? ಶ್ರೀಧರನಿಗೆ ಆಶ್ಚರ್ಯವಾಯಿತು, ತನ್ನ ಅನುಭವವನ್ನು ನೆನೆದುಕೊಂಡು ನಗೆಯೂ ಬಂದಿತು. ತಾನು ಮಾಡುತ್ತಿರುವ ಕೆಲಸದ ವಿವರ ಕೇಳಿ "ನೀನು ವಿಧಾಯಕ ಕಾರ್ಯಕರ್ತ" ಎಂದಿದ್ದ ಮಾಧವ. ಮುಂದೆ ೩–೪ ವರ್ಷಗಳಲ್ಲಿ "ಶ್ರೀಧರನು ಸಮಾಜಸತ್ತಾವಾದಿ" ಎಂದು ಗೆಳೆಯರೆ ಹೇಳಿಕೊಂಡರು; ೪–೬ ವರುಷಗಳ ಹಿಂದೆ "ಇವನು ಸಾಮ್ಯವಾದಿ–ಕಮ್ಯುನಿಸ್ಟ" ಎಂದು ಗೆಳೆಯರಲ್ಲಿಯೆ ಕೆಲವರು ದೂರದಿಂದ ಬೆರಳು ಮಾಡಿ ತೋರಿಸಿದರು. "ನೀನು ಎಂದಿನಿಂದಲೂ ತೃತೀಯಃಪಂಥ ಪ್ರಕೃತಿಯವ" ಎಂದಿದ್ದ ಹಮ್ಮೂ. ಶ್ರೀಧರನಿಗೆ ಆಶ್ಚರ್ಯವಾಗುತ್ತಿತ್ತು. ತಾನು ಎಂದಿನಂತೆ ಶ್ರೀಧರನಾಗಿಯೆ ಉಳಿದಿದ್ದರೂ ಜನರು ಈ ರೀತಿ ತನ್ನನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಿರುವರಲ್ಲ? ನಿಜವಿದ್ದ ಮಾತೆಂದರೆ ತಾನು ರಾಜಕಾರಣದಲ್ಲಿ ತಲೆ ಹಾಕಿಲ್ಲ, ಇಂದಿನ–೧೯೪೭, ಅಗಸ್ಟ ೧೫ರ–ವರೆಗೂ ಒಂದು ರಾಜಕೀಯ ಪಕ್ಷವನ್ನು ಸೇರಿಲ್ಲ. ಸಾಮಾನ್ಯ ಜನರಿಗೆ ಬುದ್ಧಿಯ ಉಪಯೋಗ ತಿಳಿಯುವಷ್ಟರ ಮಟ್ಟಿಗೆ ಶಿಕ್ಷಣ ದೊರೆಯುವ ವರೆಗೆ ದೇಶ ದಲ್ಲಿ ರಾಜಕಾರಣವೆ ಶಕ್ಯವಿಲ್ಲ ಎಂಬ ಮತ ತನ್ನದು. ಕೈಲಾದ ಮಟ್ಟಿಗೆ ಆ ಶಿಕ್ಷಣವನ್ನು ಜನರಿಗೆ ಕೊಡುವುದರಲ್ಲಿ ತೊಡಗಿದ್ದಕ್ಕಾಗಿ ಕೊನೆಗೆ ತಾನು ಪರೇಳದ ನರಕದಲ್ಲಿ ಸಿಕ್ಕಿಬಿದ್ದದ್ದು! ಆದರೆ ಅಂದು ಮಾಧವನು ತನ್ನೊಡನೆ ಉಳಿದುಕೊಳ್ಳಲು ಒಪ್ಪಿದ್ದರೆ ತಾನೀಗ ಅರಣ್ಯದಲ್ಲಿ ದಾರಿ ತಪ್ಪಿದವನಂತೆ ಹೆಚ್ಚೆಚ್ಚು ಅಡ್ಡದಾರಿಯನ್ನೆ ಹಿಡಿಯುತ್ತಿದ್ದನೊ ಇಲ್ಲವೊ?....ಶ್ರೀಧರನು ತಲೆಯ ಕೆಳಗಿನ ಕೈಗಳನ್ನು ತೆಗೆದು ಎರಡೂ ಬದಿಗಳಿಂದ ಹಣೆಯನ್ನು

ಗಟ್ಟಿಯಾಗಿ ಹಿಡಿದುಕೊಂಡನು. ಕಣ್ಣು ಮುಚ್ಚಿದ್ದನು. ನಿಜವಾಗಿ, ಅಂದು ಮಾಧವನು ಒಪ್ಪಿದ್ದರೆ——

. . . . . .

ತಾನು ದಿಟ್ಟಿಸಿ ನೋಡಲು ಮಾಧವನು ಮತ್ತೊಮ್ಮೆ ತಲೆ ಅಲ್ಲಾಡಿಸಿದನು, ಹೆಚ್ಚು ವಿಷಾದಯುಕ್ತ ಕಳೆಯಿಂದ. ಶ್ರೀಧರನಿಗೆ ಸಂಶಯ ಬಂದಿತು. ಮೂರು ದಿನಗಳ ಮುಂಚೆ ಮಹಾತ್ಮರ ಬಂಧನದಿಂದ ಮಾಧವನ ಮನಸ್ಸಿನ ಮೇಲೆ ನಿರುತ್ಸಾಹಜನಕ ಆಘಾತವಾಗಿರಬಹುದೆ? ಒಂದೆರಡು ನಿಮಿಷ ಸುಮ್ಮನಿದ್ದು ಮಾಧವನು ದಾನಾಗಿಯೆ ಮಾತು ಪ್ರಾರಂಭಿಸಿದನು. ಅದೊಂದು ಕರುಣಾಜನಕ ಕತೆ. ಅದನ್ನು ಕೇಳಿದ ಮೇಲೆ ಶ್ರೀಧರನು ಕಣ್ಣೀರು ಸುರಿಸದಿದ್ದರೆ ಅದಕ್ಕೆ ಕಾರಣ ಶ್ರೀಧರನ ಕಠೋರ ಸ್ವಭಾವವಲ್ಲ, ಹೀಗಾಗಬಹುದು ಎಂದು ಮುಂಚಿತವಾಗಿಯೆ ಶ್ರೀಧರನು ಎಣಿಸಿದ್ದು. ತನ್ನನ್ನು ಬಂಧಿಸಿದಾಗ ಕಣ್ಣುಕಟ್ಟಿದ ಸಭಿಕರ ದೃಶ್ಯವು ದುರ್ದೈವದಂತೆ ಯಾವಾಗಲೂ ಮಾಧವನ ಮುಂದೆಮುಂದೆಯೆ ನಡೆಯುತ್ತಿತ್ತು. ಅಂದಿನ ಆ ಹತವೀರ್ಯ ಕಳೆಯನ್ನು ನೋಡಿದಾಕ್ಷಣದಿಂದ ಮಾಧವನ ಮನೋವೃತ್ತಿಯೆ ಬದಲಾಗಿತ್ತು. ಆ ಮೇಲೆ ಜೇಲಿನಲ್ಲಿ ಅನಾರೋಗ್ಯ. ಮುಂದೆ ಮುಂಬಯಿಯಲ್ಲಿ ಕಣ್ಣಾರೆ ಕಂಡ ಹಿಂಸಾಕಾಂಡ. ೨–೩ ತಿಂಗಳ ವರೆಗೆ ಹಮ್ಮೂನ ಹಟಕ್ಕಾಗಿ ಮುಂಬಯಿ ಡಾಕ್ಟರರ ಉಪಚಾರ ನಡೆಸಿದರೂ ಮಾಧವನ ಪ್ರಕೃತಿ ಸುಧಾರಿಸಲಿಲ್ಲ.

"ಯಾಕೆ ಗೊತ್ತಿದೆಯೆ, ಶ್ರೀಧರಾ" ಎಂದು ಕತೆಯನ್ನು ತಡೆದು ಮಾಧವ ಕೇಳಿದ.

"ಡಾಕ್ಟರನಲ್ಲಿ ಯೋಗ್ಯತೆ ಇರಲಿಕ್ಕಿಲ್ಲ."

"ಅಲ್ಲ, ಹೆಸರಾದ ಡಾಕ್ಟರನವ. ಎಲ್ಲ ತರದ ಔಷಧೋಪಚಾರ ನಡೆಸಿದ." ಮಾಧವನು ಮುಗುಳ್ನಗೆಯಿಂದ ಮುಂದೆ ಹೇಳಿದನು. "ಆದರೆ ದೇಶದಲ್ಲಿ ನನ್ನಿಂದಾಗದ ಅಸಹಕಾರ ಚಳವಳವನ್ನು ಡಾಕ್ಟರನ ವಿರುದ್ಧ ಮಾತ್ರ ಯಶಸ್ವಿಯಾಗಿ ನಡೆಸಿದೆ ನಾನು."

"ಒಟ್ಟಾರೆ, ನಿನ್ನ ಅಸಹಕಾರ ತತ್ತ್ವಜ್ಞಾನವೆ ತಪ್ಪು ಎಂದು ನಾನು ಹೇಳುತ್ತಿಲ್ಲವೆ?"

" ಆದರೆ ಈ ಅಸಹಕಾರ ಬೇರೆ. ಡಾಕ್ಟರನ ಔಷಧಕ್ಕೆ ಸಹಾ ೨ಕ ವಾಗಿ ಪ್ರತಿಕ್ರಿಯೆಯೆ ಇರಲಿಲ್ಲವಂತೆ ನನ್ನ ಪ್ರಕೃತಿಯಲ್ಲಿ."

" ನಾನು ಕಾಲೇಜನ್ನು ಬಿಟ್ಟು (ಅದೂ ಅರ್ಧಕ್ಕೆ) ಒಂದು ವರ್ಷದ ಮೇಲಾಯಿತು. ನನಗೆ ತಿಳಿಯುವಂತೆ ಹೇಳಬಾರದೆ?" ಎಂದು ನಗೆಯಾಡಿದ ಶ್ರೀಧರ.

" ನನ್ನದು ಮನೋರೋಗವಂತೆ."

ಇಬ್ಬರೂ ಗೆಳೆಯರು ಕೆಲಹೊತ್ತು ಲಕ್ಷ್ಯವಿಲ್ಲದವರಂತೆ, ಮತ್ತೆಲ್ಲಿಯೊ ಏಕಾಗ್ರಚಿತ್ತರಾದವರಂತೆ ಸ್ತಬ್ಧರಾಗಿ ಕುಳಿತರು.

" ನನಗೆ ಅದು ಮೊದಲೇ ಗೊತ್ತಿತ್ತು" ಎಂದ ಮಾಧವ.

" ಹುಚ್ಚು! ಏನಾದರೊಂದು ಹೆಸರಿಡುವುದು! ಮನೋರೋಗವಂತೆ? ಈ ಹಾಳು ಉಪದ್ವ್ಯಾಪ ಬಿಟ್ಟು ಸ್ವಸ್ಥ ಚಿತ್ತದಿಂದ, ಎರಡೂ ಹೊತ್ತು ಸುಖದಿಂದುಂಡು, ನಾನು ಓದುವುದನ್ನು ಕೇಳುತ್ತ ಚರ್ಚಿಸುತ್ತ ಒಂದೇ ತಿಂಗಳು ಇಲ್ಲಿ ಇದ್ದುಬಿಡು. ಎಲ್ಲಿದೆ ಮನೋರೋಗ ನೋಡೋಣವಂತೆ."

ಎಂತಹ ಹೃದಯ! ಪೂರ್ವಜನ್ಮದ ಪುಣ್ಯದ ರಾಶಿಯಂತಿದ್ದ ಗೆಳೆತನ! ಮಾಧವನ ಕಣ್ಣುಗಳಲ್ಲಿ ಹನಿ ಮಿಂಚಿತು. ತನಗಾದುದನ್ನು ತೋರಗೊಡಬಾರದೆಂದು ಯತ್ನಪೂರ್ವಕ ನಗೆಯಿಂದ " ನನಗೆ ಮಾಡಿಕೊಂಡ, ಅದಕಾಗಿ ಬಿಡಲಾರದ ಹೆಂಡತಿ ಇದ್ದಾಳೆ, ಮರೆಯಬೇಡ, ಶ್ರೀಧರಾ" ಎಂದನು.

" ಹಾಗಾದರೆ ಮನೆಯಲ್ಲಿಯೆ ಇದ್ದುಕೊ."

" ಶ್ರೀಧರಾ, ಮನೆಯಲ್ಲಿಯೆ ಇರಬೇಕೆಂದು ನಿಶ್ಚಯ ಮಾಡಿದ್ದೇನೆ."

ಶ್ರೀಧರನು ಚಕಿತನಾದನು. ಮಾಧವನ ಮಾತಿನಲ್ಲಿ ನಿಶ್ಚಯದ ದನಿ ಇದ್ದಿತು, ಆದರೆ ಅದರ ಜೊತೆಗೆ ಕಾಠಿಣ್ಯವೂ ಇದ್ದಿತು. ಒಂದು ನಿಮಿಷ ಮಾಧವನನ್ನು ದಿಟ್ಟಿಸಿದನು. ಮಾಧವನು ದೃಷ್ಟಿಯನ್ನು ತಪ್ಪಿಸಲು ಯತ್ನಿಸಿದನು. ಕೂಡಲೆ ಶ್ರೀಧರನು ಅವನ ಭುಜದ ಮೇಲೆ ಕೈಯಿಟ್ಟು, ಸೌಹಾರ್ದದಿಂದ ಸಮೀಪಕ್ಕೆ ಎಳೆದುಕೊಂಡು ಅತ್ಯಂತ ವಾತ್ಸಲ್ಯದ ದನಿಯಿಂದ ಕೇಳಿದನು :–

" ಮಾಧೂ, ನಿನ್ನ ಮನಸ್ಸಿನಲ್ಲಿ ಮತ್ತೇನೊ ಇದೆ."

ಉತ್ತರವಿಲ್ಲ.

"ನಿನ್ನ ದನಿ, ನಿನ್ನ ಕಳೆ ಇದು ಸಾರಿಸಾರಿ ಹೇಳುತ್ತಿದೆ. ಹೇಳು, ಮಾಧೂ. ಇಂತಹ ಸಂದರ್ಭ ಒದಗುವುದೆಂಬ ಭರವಸೆಯಿಂದ ಒಂದು ವರ್ಷ ಕಾಲ ಕಳೆದಿದ್ದೇನೆ. ನಿನ್ನ ಬಿಡುಗಡೆಯ ದಿವಸದ ಎಣಿಕೆ ಹಾಕಿದ್ದೇನೆ. ಅಧಿಕಾರಿಗಳಿಗೆ ಬರೆದು ಕೇಳಿಕೊಂಡು ನಿನ್ನನ್ನು ಕಾಣುವ ವ್ಯವಸ್ಥೆಯನ್ನು ಕೂಡಾ ಮಾಡಿದ್ದೆ.

ಅಹುದು, ತನಗೆ ಗೊತ್ತು ಎಂಬ ಅರ್ಥವನ್ನು ಸೂಚಿಸುವಂತೆ ತಲೆ ತೂಗಿದನು ಮಾಧವನು.

"ಹಾಗಿದ್ದರೆ ನನಗೆ ಕೇಳುವ ಅಧಿಕಾರವಿದೆಯಲ್ಲವೆ ?"

ಮಾಧವನು ಮುಖವನ್ನು ಮೇಲಕ್ಕೆತ್ತಿದನು. ಅದರಲ್ಲೀಗ ಸಮಾಧಾನದ ಕಳೆಯಿದ್ದಿತು. ಒಂದು ನಿಮಿಷದ ಮುಂಚಿನ ಉದ್ವೇಗ ಮಾಯವಾಗಿತ್ತು.

"ಶ್ರೀಧರಾ, ನನ್ನಿಂದ ಯಾವ ಕೆಲಸವೂ ಆಗುವುದಿಲ್ಲ....ಇದೇ— ನನ್ನ ಮನೋರೋಗ" ಎಂದನು.

"ಹುಚ್ಚು !" ಎಂದು ಗದ್ದರಿಸಿದನು ಶ್ರೀಧರ. ಇಡಿಯ ಜಗತ್ತನ್ನೆ ತಿರಸ್ಕರಿಸುವಂತೆ ಗಹಗಹಿಸಿ ನಕ್ಕನು. ಮರುಗಳಿಗೆಯಲ್ಲಿ ಶ್ರೀಧರನ ಮುಖದಲ್ಲಿ ಕೋಪದ ಕಳೆ ಏರಿತು. "ಯಾರು ಹೇಳಿದರು ನಿನಗೆ ? ಆ ಮುಂಬಯಿಯ ಡಾಕ್ಟರನೆ ?"

ಮಾಧವನು ತನ್ನ ಗೆಳೆಯನನ್ನು ಸಂತೈಸುವವನಂತೆ ಬೆನ್ನು ಚಪ್ಪರಿಸುತ್ತ ತನ್ನ ಕತೆಯನ್ನು ಹೇಳತೊಡಗಿದನು. ಹೇಳುತ್ತ ನಡೆದಂತೆ ಶ್ರೀಧರನ ಅರಿವು ಮಾಧವನಿಗೆ ಉಳಿಯಲಿಲ್ಲ. ಯಾರಿಗೊ ಹೇಳುವಂತೆ, ಕೊನೆಕೊನೆಗೆ ತನ್ನಷ್ಟಕ್ಕೆಯೆ ಮಾತನಾಡಿಕೊಳ್ಳುವವನಂತೆ ಅವನ ಬಾಯಿಯಿಂದ ಶಬ್ದಗಳು ಒಮ್ಮೊಮ್ಮೆ ಅವಸರವಾಗಿ, ಒಮ್ಮೊಮ್ಮೆ ಅಸ್ಪಷ್ಟವಾಗಿ, ಒಮ್ಮೊಮ್ಮೆ ನಿಟ್ಟುಸಿರೊಡನೆ ಹೊರಬರುತ್ತಿದ್ದುವು. ತನ್ನ ಮನಸ್ಸಿನ ಅವಸ್ಥೆ ಹೇಗಾಗಿದೆ ಎಂಬುದನ್ನು ಇನ್ನೊಬ್ಬರು ಹೇಳಬೇಕೆ ? ಜೇಲಿಗೆ ಹೋಗುವ ಸಂದರ್ಭದಲ್ಲಿ ಮೂಡಿದ ನಿರಾಸೆ ಕ್ರಮೇಣ ಗತಿಗಾಣದ ಭಾವನೆಯಾಯಿತು. ಜೇಲಿನಿಂದ ಹೊರಬಿದ್ದ ದಿನ ಮುಂಬಯಿಯಲ್ಲಿ ಕಂಡ ದಂಗೆಯ ದೃಶ್ಯದಿಂದ ಅಹಿಂಸಾತ್ಮಕ

ಚಳವಳದ ಬಗ್ಗೆ ಅಧೈರ್ಯ ಹುಟ್ಟಿತು. ಮಾಡುವುದೇನು ? ಯಾರೂ ಹೇಳ ಲೊಲ್ಲರು. ಮುಂದಾಳುಗಳು ತಂತಮ್ಮೊಳಗೆಯೆ ಅವಿಶ್ವಾಸವನ್ನೂ ಅಧೈರ್ಯ ವನ್ನೂ ಆಡಿತೋರಿಸಹತ್ತಿದ್ದರು. ದೇಶಬಂಧು ಚಿತ್ತರಂಜನ ದಾಸರವರನ್ನು ಮೊದಲ್ಗೊಂಡು ಬುದ್ಧಿವಂತರನೇಕರು ಚಳವಳದಲ್ಲಿ ಅವಿಶ್ವಾಸ, ಈ ಧೋರಣೆ ಗಾಗಿ ಅಸಮ್ಮತಿ ಇವನ್ನು ಸ್ಪಷ್ಟವಾಗಿ ಹೇಳುತ್ತಲೆ ಜೇಲಿಗೆ ಹೋಗಿದ್ದರು; ಹಜರತ್ ಮೊಹಾನಿಯಂತಹ ಕೆಲವರು ಅಹಿಂಸೆಯನ್ನು ಬದಿಗಿಟ್ಟು, ಸಂಪೂರ್ಣ ಸ್ವಾತಂತ್ರ್ಯ ದೊರಕಿಸಬೇಕೆಂದು ಕೆರಳಿದ್ದರು; ಸಭೆ, ಭಾಷಣ, ಜೇಲು, ಬಿಡುಗಡೆ; ಮತ್ತೆ ಸಭೆ, ಮತ್ತೆ ಭಾಷಣ, ಮತ್ತೆ ಜೇಲು, ಮತ್ತೆ ಬಿಡುಗಡೆ; ಮತ್ತೆ—ಮುಂದಾಳುಗಳ ಕಾರ್ಯಕ್ರಮ ಇದಾದ್ದರಿಂದ ಜನತೆಗೆ ದಾರಿ ತೋರಿಸಲು ಅವರಿಗೆ ಸಮಯವೆ ಇಲ್ಲದಂತಾಯಿತು. ದಾರಿಗಾಣದ ಜನತೆಯಲ್ಲಿ ಮಾಧವನು ತಾನೂ ಒಬ್ಬ. ಶಿಕ್ಷಣದ ಯಾವುದೂ ಡಿಗ್ರಿ (ಪದವಿ) ಇಲ್ಲದ್ದಕ್ಕಾಗಿ ಕೆಲವರು ಅವನ ಯೋಗ್ಯತೆಯನ್ನು ಅಲಕ್ಷಿಸಿದರು; ಜೇಲಿಗೆ ಹೋಗುವುದೆ ಒಂದು ಕೆಲಸ ಎಂದು ಇನ್ನು ಕೆಲವರು ಉಪದೇಶ ಮಾಡಿದರು. ಮಾಧವನು ಎಲ್ಲಿ ಹೋದರೂ ಉತ್ತೇಜನ ದೊರೆಯಲಿಲ್ಲ; ಯಾವ ಕೆಲಸವನ್ನು ಹಿಡಿದರೂ ಅದರ ಉಪಯುಕ್ತತೆ ಎನ್ನಿಸಲಿಲ್ಲ. ಮುಂಬಯಿಯಲ್ಲಿ ೩–೪ ತಿಂಗಳ ಈ ಅನುಭವವನ್ನು ಪಡೆದು ತನ್ನಲ್ಲೂ ವಿಶ್ವಾಸವಿಲ್ಲ, ಜನತೆಯಲ್ಲೂ ವಿಶ್ವಾಸವಿಲ್ಲ ಎಂಬ ಮನಃಸ್ಥಿತಿಯಲ್ಲಿದ್ದಾಗ ಮಹಾತ್ಮಾ ಗಾಂಧಿಯವರ ಬಂಧನವಾಯಿತು.

“ ಶ್ರೀಧರಾ, ಅಂದು ನನ್ನ ಆಯುಷ್ಯವೆ ಮುಗಿಯಿತೆಂದು ತಿಳಿದೆ. ದೇಹಕ್ಕಾದ ನಿತ್ರಾಣ ಅವಸ್ಥೆ ಮನಸ್ಸಿಗೂ ಒದಗಿತು. ಓಡಿಹೋಗೋಣ ಎನ್ನಿಸಿತು. ತತ್ ಕ್ಷಣ ಮನೆಗೆ ಬಂದೆ ” ಎಂದು ಗದ್ಗದನಾಗಿ ಮಾಧವನು ಮಾತು ಮುಗಿಸಿದನು.

ಕೋಣೆಯ ಹವೆಯಲ್ಲಿಯೆ ನಿರಾಸೆಯೂ, ನಿತ್ರಾಣತೆಯೂ ತುಂಬಿ ಕೊಂಡಂತೆ ಭಾಸವಾಯಿತು. ಇಬ್ಬರೂ ಗೆಳೆಯರು ಉಸಿರಾಡಿಸಲು ಕೂಡ ಹೆದರಿದವರಂತೆ ಸ್ತಬ್ಧರಾಗಿ ಕುಳಿತರು.

. . . . .

ಶ್ರೀಧರನು ತಟ್ಟನೆ ಮಂಚದಿಂದೆದ್ದನು. ಮುಖವು ಬೆವತಿತ್ತು. ಅಂದಿನ ವಾತಾವರಣ ಇಂದೂ ಮುಸುಕಿಕೊಳ್ಳುವುದು ತನ್ನನ್ನು ಎಂಬ ಭಾವನೆಯಿಂದ ಅದನ್ನು ತಪ್ಪಿಸುವಂತೆ ತಲೆ ಜಾಡಿಸಿದನು. ಎಂತಹ ಕೋಣೆ! ಒಂದು ಕಿಟಿಕಿ ಇಲ್ಲ ಹೊರಗಿನ ಹವೆ ಸಂಚರಿಸಬೇಕೆಂದರೆ! ಉಸಿರುಗಟ್ಟಿದಂತಾಗುವುದು. ನಿಜ, ಮನಸ್ಸಿಗೂ ಹೊರಗಿನ ದಾರಿ ಕಾಣದಿದ್ದಾಗ ಹೀಗೇ ಉಸಿರುಗಟ್ಟಿದಂತಾಗುವುದು. ಏನು ಅಂದಿನ ಅವಸ್ಥೆ ಮಾಧವನದು! ಇಂದಿಗೂ ಆ ಮನೋವಸ್ಥೆಗೇ ಆಹುತಿಯಾಗಿದ್ದಾನೆ. ಮಾಧವನೊಬ್ಬನೆ ಹಾಗಾಗಿರಬಹುದೆ? ಶ್ರೀಧರನು ಮತ್ತೆ ಕೋಣೆಯಲ್ಲಿ ಅತ್ತಿಂದಿತ್ತ ಸುಳಿದಾಡಹತ್ತಿದನು....ಅದೇಕೆ?....ಅಂದು ಮಾಧವನಂತೆ ಸಾವಿರಾರು ತರುಣರು ಮನಸ್ಸನ್ನು ಕಳೆದುಕೊಂಡಿರಬಹುದು, ನಿಷ್ಪ್ರಾಣ ಬೊಂಬೆಗಳಂತೆ ಇಂದಿಗೂ ಜೀವಿಸುತ್ತಿರಬಹುದು....ದೇಶದ ದೃಷ್ಟಿಯಿಂದ ಎಂತಹ ಅನರ್ಥ! ಶಸ್ತ್ರಾಸ್ತ್ರಗಳ ಯುದ್ಧದಲ್ಲಿ ಸಾವಿರಾರು ತರುಣರು ಜೀವವನ್ನು ಕಳೆದುಕೊಳ್ಳುವುದು ಇದಕ್ಕೂ ಉತ್ತಮ....ಈ ನಿಃಶಸ್ತ್ರ ಯುದ್ಧದಲ್ಲಿ ಸಾವಿರಾರು ತರುಣರು ಜೀವವನ್ನು ಕೆಡಿಸಿಕೊಂಡು ಬದುಕುವುದು ಹೆಚ್ಚಿನ ಅನರ್ಥ. ಅಂದಿನ ತರುಣರೆ ಇಂದು ಮುಂದಾಳಾಗಿದ್ದಾರೆ, ಮಾಧವನ ಸಮಾನವಯಸ್ಕರು! ಮಾಧವನಂತೆ ಮತಿಗೆಟ್ಟ, ಧೃತಿಗೆಟ್ಟ, ನಂಬುಗೆಗೆಟ್ಟವರು! ಅದಕಾಗಿಯೆ ಇಂದು ಈ ಅವಸ್ಥೆ ಬಂದಿದೆಯೆ? ಯಾವ ದಾರಿಯೂ ಕಾಣದಾಗ ಅಡವಿಯ ದಾರಿ ಕಂಡರೂ ಸಂತೋಷ....ಶ್ರೀಧರನಿಗೆ ಬೇಜಾರಾಯಿತು.... ವಿಚಾರ—ಬರಿಯ ವಿಚಾರ....ಇಂದು ಪ್ರತ್ಯಕ್ಷ ಒಂದು ಘಟನೆ ನಡೆದು ಹೋಗಿರುವಾಗ ಇಂತಹ ವಿಚಾರಗಳ ಉಪಯೋಗವೇನು?....ಹೋಗಲಿ, ತಾನಾದರೂ ಈ ವಿಚಾರ ನಡೆಸಿದ್ದು ಯಾಕೆ? ಕೇವಲ ಆನುಷಂಗಿಕವಾಗಿ. ಇಂದು ಮಾಧವನನ್ನು ಕಾಣಬೇಕಾಗಿದೆ, ಆ ಸಂದರ್ಭದಲ್ಲಿ ಹಿಂದಿನದು ಸ್ಮರಣೆಗೆ ಬಂದಿದೆ....ಇಷ್ಟೆ. ತನಗೇನು ಇದರ ಗೊಡವೆ? ರಾಜಕಾರಣದಲ್ಲಿ ಯಾವ ಪಕ್ಷವನ್ನೂ ಸೇರಿಲ್ಲ, ಯಾವ ಪಕ್ಷವನ್ನೂ ಸ್ಥಾಪಿಸಿಲ್ಲ....ಶ್ರೀಧರನಿಗೆ ತುಸು ಸಮಾಧಾನವಾಯಿತು, ಮನಸ್ಸು ಹಗುರಾಯಿತು. ಮುಂದಿದ್ದ ಮೇಜಿನ ಮೇಲೆ ಕಾಲು ಚಲ್ಲಿ ಕುರ್ಚಿಯಲ್ಲಿ ಬಿದ್ದುಕೊಂಡನು....ಶ್ರೀಧರನು ಗಾಬರಿಗೊಂಡವನಂತೆ ತಟ್ಟನೆ ಸಾವರಿಸಿಕೊಂಡೆದ್ದನು. ಮೇಜಿನ ಮೇಲಿದ್ದ

ಗಡಿಯಾರದಲ್ಲಿ ಸರಿಯಾಗಿ ೧೧ ಗಂಟೆಯಾಗಿತ್ತು. ಹತ್ತು ನಿಮಿಷಗಳ ವರೆಗೆ ತನಗೆ ನಿದ್ರೆ ಹತ್ತಿತ್ತಲ್ಲವೆ? ನಿದ್ರೆಯೆ ಇರಬೇಕು, ಯಾಕೆಂದರೆ ತಾನು ಕಂಡ ದೃಶ್ಯ ಕನಸಿನ ದೃಶ್ಯ. ಮಾಧವನು ನಗುತ್ತಲಿದ್ದನು. ಆ ಕಳೆಯನ್ನು ಮಾಧವನ ಮುಖದ ಮೇಲೆ ನೋಡಿ ಎಷ್ಟು ವರ್ಷಗಳಾದವೊ? ಆದ್ದರಿಂದ ತಾನು ಕಂಡದ್ದು ಖಂಡಿತವಾಗಿ ಕನಸು!....ಒಂದು ನಿಮಿಷ ಹೆದರಿದನು ಶ್ರೀಧರ. ಕನಸಿನಲ್ಲಿ ನಗೆಮೊಗ ಕಂಡರೆ ಅಶುಭವಂತೆ, ನಗೆಮೊಗದ ವ್ಯಕ್ತಿಗೆ, ತನಗಲ್ಲ....ಮಾಧವನಿಗೆ ಏನಾದರೂ—ಛೆ! ಹುಚ್ಚು. ಮಾಧವನ ವಿಷಯವಾಗಿಯೆ ತಲೆತುಂಬ ವಿಚಾರವಿದ್ದುದರಿಂದ ಅವನು ಕನಸಿನಲ್ಲಿ ಕಾಣಿಸಿಕೊಂಡನು. ಆದರೆ ನಗೆಮೊಗವೇಕೆ?—ಛೆ! ಇದೇನು?....ಮಾಧವನು ಎಂದೂ ನಕ್ಕಿಲ್ಲವೆ?....

. . . .

೧೪

ಹತಾಶನಾಗಿ ಜೇಲಿನಿಂದ ಮರಳಿ ಬಂದಾಗ ಮಾಧವನ ಜೀವನದಲ್ಲಿ ನಗೆ ನಿರ್ನಾಮವಾಯಿತು ಎಂದು ಶ್ರೀಧರನು ತಿಳಿದಿದ್ದನು. ಶ್ರದ್ಧೆಯನ್ನೆ ಕಳೆದುಕೊಂಡೆನೆಂದು ಹೇಳುವನಲ್ಲ? ಶ್ರದ್ಧೆ ಇಲ್ಲದ ಜೀವಿತಕ್ಕೆ ಸಿದ್ಧಿ ಎಲ್ಲಿಂದ ಬಂದೀತು?....ಆದರೂ ಹತ್ತಿರ ಹತ್ತಿರ ಊರು ಇದ್ದುದಕ್ಕೆ ಮಾಧವನು ಮೇಲಿಂದ ಮೇಲೆ ತನ್ನನ್ನು ಕಾಣಲು ಬಂದಾಗ ಒಮ್ಮೆ ಶ್ರೀಧರನಿಗೆ ಆಶ್ಚರ್ಯವಾಯಿತು. ಮತ್ತೆ ಮಾಧವನ ಮುಖದಲ್ಲಿ ಕಳೆ ಮೂಡುತ್ತಿದೆ! ಆಸೆಯೂ ಆಯಿತು ಶ್ರೀಧರನಿಗೆ. ಮಾಧವನಿಗಾಗಿ ಮೊದಲಿನಿಂದಲೂ ತನ್ನಲ್ಲಿದ್ದ ಆಶೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಸುಸಂದರ್ಭ ಮತ್ತೆ ಒದಗಬಹುದು?

"ಇತ್ತಿತ್ತಲಾಗಿ ಮತ್ತೆ ನಾನು ಮೊದಲಿನ ಮಾಧವನನ್ನು ಕಾಣುತ್ತಲಿದ್ದೇನೆ" ಎಂದು ನಗೆಯಿಂದ ಹೇಳಿದನು.

"ತಪ್ಪು, ಶ್ರೀಧರಾ; ನೀನು ಕಾಣುವುದು ಹೊಸ ಮಾಧವನನ್ನು. ಮೊದಲಿನವನು ಸತ್ತುಹೋದನು."

"ಓಹೊ! ಅದು ಸಂತೋಷದ ಸಂಗತಿ ಎಂದು ನಗೆಯಿಂದ ಹೇಳುವಿಯಲ್ಲವೆ?" ಎಂದು ಶ್ರೀಧರ ಹಂಗಿಸಿದನು.

"ಸಂತೋಷದ್ದೆ ಸಂಗತಿ. ಸಂಶಯವೇನು? ಹೊಸ ಮಾಧವನಿಗೆ ಜಗತ್ತಿನಲ್ಲಿ ವಿಶ್ವಾಸ ಹುಟ್ಟಹತ್ತಿದೆ."

" ಹಾಗಿದ್ದರೆ ಆ ಜಗತ್ತಿಗೆ ಧನ್ಯವಾದಗಳು. "

" ತಡೆ, ಶ್ರೀಧರಾ; ಆ ಜಗತ್ತು ಯಾವುದು–ಎಂದು ತಿಳಿದರೆ ನೀನು ಧನ್ಯವಾದ ಕೊಡುವೆಯೊ ಇಲ್ಲವೊ ? "

" ಯಾವುದೇನು ? ಇದ್ದದ್ದು ಒಂದೇ ಜಗತ್ತು. "

" ನಿಜ" ಎಂದನು ಮಾಧವ. ಅವನ ಮುಖ ಅರಳಿತು. "ಪ್ರತಿಯೊಬ್ಬನಿಗೆ ಇದ್ದದ್ದು ಒಂದೇ ಜಗತ್ತು; ನನಗೂ ಒಂದಿದೆ. ಆದರೆ ನನ್ನದು ಬಹಳೇ ಚಿಕ್ಕದು." ತಡೆದನು. ನಗೆಯಿಂದ ತುಂಬಿದ ಕಣ್ಗಳಿಂದ ಶ್ರೀಧರನನ್ನು ನೋಡಿದನು. " ನನ್ನ ಜಗತ್ತು ಎಂದರೆ ನನ್ನ ಹೆಂಡತಿ. "

" ಭಲೆ ! " ಎಂದನು ಶ್ರೀಧರ. ಏನೆನ್ನಬೇಕೊ ತಿಳಿಯದಂತಾಯ್ತು.

" ಶ್ರೀಧರಾ, ನಿನಗೆ ಹೇಳುವೆ. ಜೇಲಿನಿಂದ ಮರಳಿದ ಮೇಲೆ ಎಲ್ಲರಿಗೂ ಬೇಡಾದೆ, ಜಗತ್ತಿಗೆ ಬೇಡಾದೆ, ಇಷ್ಟೇಕೆ ?—ನನಗೇ ನಾನು ಬೇಡಾದೆ. ಆದರೆ ಮನೆಗೆ ಬಂದೆ. ಒಬ್ಬರಿಗೆ ಮಾತ್ರ ನಾನು ಬೇಕಾಗಿದ್ದೆ. ಯಾರು ನನಗೆ ಬೇಡ ಎಂದೆನ್ನಿಸಿತ್ತೊ ಅವರಿಗೇ ನಾನು ಬೇಕಾದೆ. ಇಲ್ಲವಾದರೆ, ಹೊರಗೂ ಒಳಗೂ ಸುಧಾರಿಸಲಶಕ್ಯವಾದಂತೆ ಮುರಿದ ಈ ಬೊಂಬೆಯನ್ನು ಈ ರೀತಿ ತಿದ್ದಿ, ತುಂಬಿ, ಉಳಿಸಿ, ಬೆಳೆಸುತ್ತಿದ್ದರೆ ? "

" ಹುಂ " ಎಂದು ಸೂಚ್ಯಾರ್ಥದ ನಗೆಮೊಗದಿಂದ ಶ್ರೀಧರನು ಗೆಳೆಯನನ್ನು ದಿಟ್ಟಿಸಿದನು.

" ಶ್ರೀಧರಾ—"

" ತಿಳಿಯಿತು ! ತಿಳಿಯಿತು ! ಪ್ರವಾಳಶೋಭಾ ಇವ ಪಾದಪಾನಾಂ–ಗಿಡಕ್ಕೆ ಒಡೆಯುವ ಚಿಗುರಿನಂತೆ ! ಅಹುದಲ್ಲೊ ? ಬೇಸಗೆ ಬಿಸಿಲಿನಿಂದ ಬೆಂದು, ಬರಿದಾಗಿ, ಬಾಡಿ, ಒಣಗಿ ನಿಂತ ಕೊಂಬೆಗೆ ಕುಸುರುವ ಚಿಗುರಿನಂತೆ! ಜೀವನದಲ್ಲಿ ವಿಶ್ವಾಸವನ್ನು ಹುಟ್ಟಿಸುವುದು ಜೀವನವೆ. ಅಹುದಲ್ಲೊ? ಜೀವನವು ಹೊಸ ವಿಶ್ವಾಸವನ್ನು ಹುಟ್ಟಿಸುವುದು–ಅಲ್ಲಲ್ಲ–ಏನು–ಹೊಸ ಜೀವನವು ವಿಶ್ವಾಸವನ್ನು ಹುಟ್ಟಿಸುವುದೊ ? ಅಂ ? " ಎಂದು ಕೆಣಕಿದನು.

ಇಬ್ಬರೂ ಗೆಳೆಯರು ಮನಃಪೂರ್ತಿಯಾಗಿ ನಕ್ಕಿದ್ದರು...........

ಆ ನಗೆ ಮಾಧವನಲ್ಲಿ ಕೆಲಕಾಲ ಬೇರೂರಿದಂತಾಯಿತು. ಕ್ರಮೇಣ ಮುಖ, ಮೈ ಎಲ್ಲವನ್ನೂ ವ್ಯಾಪಿಸುವಂತಾಯಿತು. ಮಾಧವನಿದ್ದಲ್ಲಿ ಅವನ

ಧ್ವಜದಂತೆ ನಗೆಯೂ ಇದ್ದಿತು....ಹಾಂ–ಆ ನಗೆಗೆ 'ಧ್ವಜ' ಎಂದು ಹೆಸರಿಟ್ಟವನೆ ತಾನು, ಶ್ರೀಧರ....ಕಳೆದ ವಿಶ್ವಾಸ ಮರಳಿ ಬಂದಿತಲ್ಲ? ಜಗತ್ತಿನೊಡನೆ ಹೋರಾಡಿ ಸೌಬುಗೆಯನ್ನು ಗೆದ್ದನಲ್ಲ ಮಾಧವ? ಅವನ ಜೀವನದಲ್ಲಿ ವಗೆಯೂ ಆಗಲೇ ಬಂದಿತ್ತು.

ಶ್ರೀಧರನಿಗೆ ಆಗ ಮಿಕ್ಕ ಜಗತ್ತಿನ ಗೊಡವೆ ಇದ್ದಿರಲಿಲ್ಲ; ಮಾಧವನೊಬ್ಬನಾದರೆ ಸಾಕು. ಉಪಯುಕ್ತವಾದ ಗ್ರಂಥಗಳನ್ನು ಓದುವುದು, ಚರ್ಚಿಸುವುದು. ಅದಕ್ಕೂ ಮುಖ್ಯವಾದುದೆಂದರೆ ತಮ್ಮಿಬ್ಬರ ಹಳ್ಳಿಗಳಲ್ಲೂ ಒಂದೊಂದು ಸಾಯಂಕಾಲ ಉತ್ಸಾಹಿ ಹಳ್ಳಿಗರಿಗೆ ಓದುಬರೆ ಕಲಿಸುವುದು. ಮಾಧವನು ಇನ್ನೂ ಒಂದು ವ್ಯಾಸಂಗವನ್ನಿಟ್ಟುಕೊಂಡಿದ್ದನು. ಖಾದಿ... ಸ್ವಲ್ಪ ಜನರನ್ನು ಕಲೆಹಾಕಿ ಹರಟೆ ಹೊಡೆಯುವ ಸಾಯಂಕಾಲದ ಸಮಯಕ್ಕೆ ತಕಲಿ ಇಲ್ಲವೆ ರಾಟೆಯನ್ನು ನಡೆಸುವುದು. ಇದಕಾಗಿ ಶ್ರೀಧರನು ಎಷ್ಟೋ ಸಲ ನಗೆಯಾಡಿದ್ದನು. ರಾಟೆ ನಡಿಸಿದರೆ ಮುಗಿಯಲಿಲ್ಲ ಮಾಧವನಿಗೆ; ನೂಲುವುದು ಒಂದು ಪ್ರಚಂಡ ಕ್ರಾಂತಿ ಎಂದು ಅವನ ವಾದ. ಇದೇ ಶ್ರೀಧರನಿಗೆ ಮೋಜು ಎನ್ನಿಸಿದ್ದು. ಯಾಕೆಂದರೆ, ಚಿಕ್ಕವನಿದ್ದಾಗಿನಿಂದಲೂ ಬೇರೆ ಯಾರು ಇಲ್ಲದಿದ್ದರೂ ತಮ್ಮ ಊರ ಜೋಯಿಸರು ತಕಲಿಯನ್ನು ನಡೆಸುವುದನ್ನು ಅವನು ನೋಡಿದ್ದ. ಜೋಯಿಸರೂ ಎಂದಿನಿಂದಲೆ ಕ್ರಾಂತಿಕಾರರು! ಹಹ!....ತಕಲಿ ನಿಮಿತ್ತ ತೊಡೆ ಚಪ್ಪರಿಸಬೇಕಾಗುವುದೆಂದು ಕ್ರಾಂತಿ ಎನ್ನಬಹುದೆ?....ಹೋಗಲಿ. ಸದ್ಯಕ್ಕೆ ಮಾಧವನು ವಿಶ್ವಾಸದಿಂದ ಕೆಲಸ ಮಾಡಿದರೆ ಸಾಕು....ಹತ್ತಾರು ಜನರನ್ನು ಒಂದೆಡೆ ಸೇರಿಸುವ, ಹರಟೆ ಹೊಡೆಯುತ್ತ ಸಹವಾಸ ಬೆಳೆಯಿಸಿಕೊಳ್ಳುವ; ಅಂತೂ, ದಿನನಿತ್ಯದ ಜಗಳ-ದ್ವೇಷಗಳಿಂದ ಹಳ್ಳಿಯ ಜೀವನಕ್ಕೆ ಇದು ಹಿತಕರ....ಇದಲ್ಲದೆ, ಇನ್ನೂ ಒಂದು ಮಾತು. ಮಾಧವನ ಬುದ್ಧಿಮತ್ತೆಗಾಗಿ ತನಗೆ ಎಂದಿನಿಂದಲೂ ಆದರವಿದ್ದಿತು. ನೋಡಬಾರದೆ ಈಗ ಆ ಬುದ್ಧಿಮತ್ತೆಯ ಸದುಪಯೋಗವನ್ನು? ದಿನದ ಸಾಯಂಕಾಲದ ಹರಟೆಯ ಸದಸ್ಯರಿಂದ ಮಾಧವನು ಕ್ರಮೇಣ ಒಂದು ಸಹಕಾರಿ ಸಂಘವನ್ನು ಮಾಡಿಕೊಂಡನು....ನೂಲುವುದು, ನೇಯುವುದು.... ಎರಡನ್ನೂ ಮಾಡದವರು ತಯಾರಾದ ಬಟ್ಟೆಯ ಮಾರಾಟವನ್ನು ಮಾಡುವುದು....ಲಾಭ, ಎಲ್ಲರೂ ಸಮನಾಗಿ ಹಂಚಿಕೊಳ್ಳುವುದು....

" ಇದೀಗ ನಿನ್ನ ಬುದ್ಧಿ ಮತ್ತೆಯ ಸದುಪಯೋಗ " ಎಂದನು ಶ್ರೀಧರ.

" ರಾಟೆ ತಿರುಗಿಸುವುದು ! ಕತ್ತೆಯ ಬುದ್ಧಿ ಅದರ ಕಾಲೊಳಗೆ, ಹಾಗೆ ನನ್ನ ಬುದ್ಧಿ ಕೈಯೊಳಗೆ ! ಅಂ ? " ಎಂದು ಮಾಧವನು ನಕ್ಕನು........

ನಗೆ ಮಾಧವನಲ್ಲಿ ಕೆಲಕಾಲ ಬೇರೂರಿದಂತಾಗಿತ್ತು. ಆದರೆ ಬಹುಕಾಲ ಮಾತ್ರ ಅಲ್ಲ. ಒಂದು ದಿನ ಶ್ರೀಧರನಿಗೆ ಹೆದರಿಕೆಯಾಯಿತು, ಮಾಧವನ ನಗೆಯ ದಿನ ಮುಗಿದೇ ಹೋದುವೆಂದು. ಯಾವುದು ಆ ದಿನ ? ಮುಂಬಯಿ ಯಿಂದ ಬಂದ ಸುಮಾರು ಒಂದು ವರ್ಷದ ನಂತರ. ಯಾವುದು ಆ—? ಛೆ ! ಅದನ್ನು ಮರೆಯುವುದೆ ಶಕ್ಯವಿಲ್ಲ. ೧೯೨೩ರ ಮೇ ತಿಂಗಳು. ಮಾಧವನಿಗೆ ಗಂಡುಮಗು ಹುಟ್ಟಿದ ದಿನ. ಆ ದಿನ ಮಾಧವನಿಗೆ ಅಷ್ಟೊಂದು ನಗೆ ಇರಲಿಲ್ಲ.

" ಯಾಕೊ, ಮಾಧೂ ? ಸ್ವರ್ಗದ ಪ್ರವೇಶಪತ್ರ ದೊರೆತಂತಾಯಿ ತಲ್ಲ ? ನಗೆಯ ಬದಲು ಜೋಲುಮೋರೆ ಹಾಕಿರುವೆಯಲ್ಲೊ ? " ಎಂದು ಅವನನ್ನು ಹೊಡೆದೆಚ್ಚರಿಸುವಂತೆ ಬೆನ್ನು ಚಪ್ಪರಿಸಿ ಕೇಳಿದ ಶ್ರೀಧರ.

" ಸ್ವರ್ಗ ಅಲ್ಲ, ಮೋಕ್ಷದ ಪ್ರವೇಶಪತ್ರ "

" ಹಾಗೇ ಅನ್ನು. ಸಕ್ಕರೆಯ ಪೇಢೆದ ಬದಲು, ಖೋವಾದ ಪೇಢೆ. " ಎಂದನು ಶ್ರೀಧರ.

" ಯಾವ ಪೇಢೇನೂ ಅಲ್ಲ, ಗಿಡದ ತೊಪ್ಪಲದ ಪಾಳಿ ಬಂಧಾಗಾಯ್ತು."

ಶ್ರೀಧರನು ಹುಬ್ಬುಗಂಟಿಕ್ಕಿದನು. ಮತ್ತೆ ಬುದ್ಧಿಭ್ರಮೆ ಬಂದಿತೆ ತನ್ನ ಗೆಳೆಯನಿಗೆ ಎಂಬ ವಿಚಾರದ ಹೆದರಿಕೆಯಿಂದ ಒಳಗಿಂದೊಳಗೆಯೆ ನಡುಗಿ ದನು. " ವೇದಾಂತದ ಬದಲು ಕನ್ನಡ ವಾಕ್ಯದೊಳಗೆ ಹೇಳಬಾರದೆ ? " ಎಂದು ವಿನೋದದ ವಾತಾವರಣವನ್ನು ಕಲ್ಪಿಸುವ ಯತ್ನದಿಂದ ನುಡಿದನು.

" ಶ್ರೀಧರಾ, ಈಗ ನನಗ ಪಶ್ಚಾತ್ತಾಪ ಆಯಿತು—ಅಲ್ಲಲ್ಲ—ಈಗ ನನಗೆ ಬುದ್ಧಿ ಬಂದಿತು ಅನ್ನು. "

" ನೀನು ಹೇಳೋದು ಒಂತುಸಾ ಆದ್ರೂ ತಿಳಿದರೆ ಅಂತೀನಿ. "

" ನಾನು ಕಳೆದ ವರ್ಷ ಹ್ಯಾಗೆ ಕಳೆದೀನಿ ಅನ್ನೋದರ ಕಲ್ಪನೆ ನಿನ ಗಿಲ್ಲ, ಶ್ರೀಧರಾ—"

" ವಿಧಾಯಕ ಕಾರ್ಯಕ್ರಮದೊಳಗ ತೊಡಗಿ-" ನಗೆಯಿಂದ-" ಆ ಕಾರ್ಯಕ್ರಮದ ಪಟ್ಟಿಯೊಳಗೆ ಒಂದು ಗಂಡು ಮಗುವನ್ನೂ ಸೇರಿಸಿ. "

ಮಾಧವನು ಉಸುರ್ಗರೆದನು. ತಲೆ ಅಲ್ಲಾಡಿಸಿದನು. ಬಂದು ಬಡೆದು ಕೊಂಡಿತು ಮತ್ತೆ ಹಿಂದಿನ ದೆವ್ವ ಎಂದು ಶ್ರೀಧರನು ಒಳಗಿಂದೊಳಗೆಯೆ ಹಲ್ಲುಕಟೆದನು.

"ಕೇವಲ ಮೋಹ" ಎಂದನು ಮಾಧವ. ಎದುರು ದಿಟ್ಟಿಸಿ ನೋಡು ತ್ತಲೆ ಮಾತನಾಡಿದನು. ಕೇವಲ ಮೋಹ. ಅದೂ ಇಂದ್ರಿಯ ಮೋಹ. ಛೆ! ನನ್ನ ಮನಸ್ಸಿಗೆ, ನನ್ನ ಇಂದ್ರಿಯಗಳಿಗೆ ಸಂತೃಪ್ತಿ ದೊರೆಯುವುದು, ದೊರೆಯಲಿ ಎಂದು ಇಡಿಯ ವರ್ಷ ಕಾಮವಾಸನೆಯ ಮೋಹದಲ್ಲಿಯೆ ಕಳೆದೆ—"

"ಏ, ಪುಣ್ಯಾತ್ಮಾ—" ಶ್ರೀಧರನಿಗೆ ತಡೆಯದಂತಾಯಿತು, ಸಿಟ್ಟೊ ಬಂದಿತು, "ಪುಣ್ಯಾತ್ಮಾ, ನೀನು ಹೇಳೋದು ತಿಳೀತು ನನಗ. ಅದನ್ನ ತಿಳಿದುಕೊಳ್ಳುವಷ್ಟು ವಯಸ್ಸು ಇದೆ ನನಗೆ. ನಿನಗ ಗಂಡುಮಗು ಹುಟ್ಟಿದೆ. ಹ್ಯಾಗೆ–ಅನ್ನೋದು ನನಗೂ ತಿಳೀತದೆ ಅಂದೆ." ಶ್ರೀಧರನು ಹಾವಿನಂತೆ ಬುಸುಗುಟ್ಟುತ್ತಿದ್ದನು. "ಮೋಹ ಅಂತೆ! ಕಾಮವಾಸನೆ ಅಂತೆ! ಅಲ್ಲೊ, ಮಾಧೂ, ತರುಣನಿದ್ದಾಗ ತಾರುಣ್ಯದ ಹೊಣೆಗಾರಿಕೆ ಹೊತ್ತರೆ ಮೋಹ ಏನು ಅದು?—"

"ನಾನು ಹೊಣೆಗಾರಿಕೆ ಅನ್ನೋ ದೃಷ್ಟಿಯಿಂದ ಆಚರಿಸಲಿಲ್ಲ, ಶ್ರೀಧರಾ. ಅದೇ ನನ್ನ ಮನಸ್ಸನ್ನು ತಿನ್ನಹತ್ತಿದೆ ಈಗ. ನೊಂದ ಮನಸ್ಸು, ಬೆಂದ ದೇಹ–ಇವೆರಡಕ್ಕೂ ಅದೊಂದು ವಿನೋದ–ವಿಶ್ರಾಂತಿ ಅಂತ ತಿಳಿದು ಕೊಂಡೇ ಲೋಲುಪನಾದೆ—"

"ಭಲೆ! ಬ್ರಹ್ಮಚರ್ಯದ ಬ್ರಹಸ್ಪತಿ!" ಶ್ರೀಧರನ ದನಿಯಲ್ಲಿ ಅಸಹನೆ ಇದ್ದಿತು, ತಿರಸ್ಕಾರವಿದ್ದಿತು. "ವಿನೋದ–ವಿಶ್ರಾಂತಿ ಅಂತ ತಿಳಿದು ಕೊಂಡಿದ್ದ ಅಂತ! ಸಕ್ಕರೆಗೆ ಸಕ್ಕರೆ ಅಂತ ತಿಳಿದುಕೊಳ್ಳದಿದ್ದರೆ ಬಾಯಿ ರುಚಿಗೆ ಕಹಿ ಹತ್ತೋದಲ್ಲ ಸಕ್ಕರೆ? ಏನು? ಹೇಳೊ, ಬಾದರಾಯಣಾ!"

"ನೀನು ಏನು ಬೇಕಾದ್ದನ್ನ ಹೇಳು. ನಾನು ಮಾಡಿದ್ದು ತಪ್ಪು ಅಂತ ಅನಿಸಿದೆ, ನಾಚಿಕೆಯಾಗಿದೆ ನನಗೆ"

"ಅದಕ್ಕ ಮಗ ಹುಟ್ಟಿದ ಅಂತ ಮುಖ ಕೆಳಗ ಮಾಡ್ತೀಯಾ?"

"ನಾಗಪುರಕ್ಕೆ ಹೋಗಬೇಕು ಅಂತ ನಿರ್ಧಾರ ಮಾಡೀನಿ."

"ಆಂ ? ಏನೆಂದೆ ? "

ಶ್ರೀಧರನು ಪೆಚ್ಚಾದನು. ಸಂದರ್ಭ ಯಾವುದು ? ಹೇಳುವನೇನು ? ಬುದ್ಧಿಭ್ರಂಶ ಆಗಿರಲಿಕ್ಕಿಲ್ಲವಷ್ಟೆ ?

"ನಾಗಪುರದಲ್ಲಿ ಸಂನ್ಯಾಸ ಕಲಿಸೋ ಕಾಲೇಜ ಅದ ಅಂತ ಗೊತ್ತಿಲ್ಲ ಬಿಡು ನನಗ."

ಮಾಧವನು ಮತ್ತೆ ಉಸುರ್ಗರೆದನು. ಮಾತನಾಡಬೇಕೊ ಬಿಡಬೇಕೊ ಎಂಬುದರ ನಿರ್ಧಾರವಿಲ್ಲದವನಂತೆ ಒಂದೆರಡು ನಿಮಿಷ ಸುಮ್ಮನಿದ್ದನು. ಕೊನೆಗೆ ಎದ್ದನು. ಶ್ರೀಧರನೂ ಅವನೊಡನೆ ಹೊರಟನು. ಬಾಗಿಲಿನ ಹತ್ತಿರ ಬಂದ ಮೇಲೆ ಮಾಧವನು ತಡೆದು, ಶ್ರೀಧರನ ಭುಜ ತಟ್ಟುತ್ತ ಯತ್ನಪೂರ್ವಕ ನಗೆಯಿಂದ "ಸ್ವಯಂಸೇವಕನಾಗಿ ಹೋಗುವೆ. ನಾಗಪುರದಲ್ಲಿ ಧ್ವಜಸತ್ಯಾಗ್ರಹ ನಡೆದಿದೆ" ಎಂದವನೆ ಬಿರಿಬಿರಿ ನಡೆದನು. ಹಿಂಬಾಲಿಸಬೇಕೆಂದು ಎತ್ತಿದ ಹೆಜ್ಜೆಯನ್ನು ತಡೆದು ನಿಟ್ಟುಸಿರಿನಿಂದ ಅವನು ಹೋದುದನ್ನೆ ದಿಟ್ಟಿಸುತ್ತ ದಿಙ್ಮೂಢನಾದ ಕಳೆಯಿಂದ ಶ್ರೀಧರನು ಬಾಗಿಲಲ್ಲಿಯೆ ನಿಂತನು.

. . . .

೧೪

ಶ್ರೀಧರನು ಉದ್ದವಾಗಿ ಉಸಿರನ್ನೆಳೆದು ಕುರ್ಚಿಯಿಂದೆದ್ದನು. ಹುಬ್ಬುಗಂಟಿಕ್ಕಿ ಎದುರಿನ ಬಾಗಿಲನ್ನು ದಿಟ್ಟಿಸಿದನು. ಹೊರಗೆ ಹುಡುಗರ ಸದ್ದು ತುಸು ಶಾಂತವಾಗಿದೆ. ಚಿಕ್ಕಮಕ್ಕಳ ಊಟದ ಸಮಯ. ಸಾಲದ ಸೀದಾಧಾನ್ಯದಲ್ಲಿ ತಾವು ಕಡಮೆ ತಿಂದು ಮಕ್ಕಳನ್ನು ಉಣ್ಣಿಸುವರು ಈ ಬಡವ ತಾಯ್ತಂದೆಗಳು. ಎಂದರೆ ? ಇವರಿಗೆ ಈ ಸ್ಥಿತಿಯಲ್ಲೂ ಮಕ್ಕಳು ಬೇಕಾಗಿದ್ದಾರೆಯೆ ? ಹೊಟ್ಟೆಯಿಂದ, ರಕ್ತ ಮೈಗೂಡಿಸಿಕೊಂಡು ಹುಟ್ಟಿದ ಮಗುವಿಗಾಗಿ ಪ್ರತಿಯೊಂದು ಪ್ರಾಣಿಯೂ ಹೀಗೆಯೆ ವರ್ತಿಸುತ್ತಿರಬಹುದೆ ? ಇಲ್ಲವೆ ತ್ಯಾಗಬುದ್ಧಿ ಮನುಷ್ಯಪ್ರಾಣಿಗೆ ಮಾತ್ರ ಇದೆಯೆ ? ಮಾಧವನೂ ಮನುಷ್ಯಪ್ರಾಣಿ; ಆದರೆ ಅಂದು ಹೆಂಡತಿ, ಮಗ ಇವರನ್ನು ಹಾಗೇ ಬಿಟ್ಟು ಧ್ವಜಸತ್ಯಾಗ್ರಹದಲ್ಲಿ ಧುಮುಕಿದನಲ್ಲ ? ಏ—ನೊ–ಒ–ಒ– ? ಶ್ರೀಧರನಿಗೆ ಸಂದೇಹ. ಇಂದಿಗೂ ಗೂಢ. ಈ ಗೂಢ ಅಂದು ಬಿಟ್ಟದ್ದರೆ ಮಾಧವನನ್ನು

ಹಾದಿಗೆ ತರಬಹುದಾಗಿತ್ತು. ಇಷ್ಟೇಕೆ? ಈಗ—ಇಪ್ಪತ್ನಾಲ್ಕು ವರ್ಷಗಳ ತರುವಾಯ–ಇಂದು ಆ ಗೂಢ ಬಿಟ್ಟರೆ ಇನ್ನೂ ಮಾಧವನನ್ನು ಸುಧಾರಿಸ ಬಹುದಾಗಿದೆ....ಏ—ನೊ–ಒ–ಒ–ಒ—ಮಾಧವನು ಧ್ವಜಸತ್ಯಾಗ್ರಹದಲ್ಲಿ ಯಾಕೆ ಧುಮುಕಿದನು ? ಮನೆಮಾರು ಬಿಟ್ಟು ಇಷ್ಟು ದೂರ ಹೋದನೇಕೆ? ದೇಶಸೇವೆ ಎಂದೊ ? ಕಳವಳಗೊಂಡ ತನ್ನ ಮನಸ್ಸಿನ ಸಮಾಧಾನಕ್ಕೆಂದೊ? ಸ್ವಾತಂತ್ರ್ಯಯುದ್ಧದಲ್ಲಿ ಸೈನಿಕನಾಗಬೇಕೆಂಬ ಹುಮ್ಮಸವೊ ? ಸ್ವಂತದ ಭಾವನೆಯನ್ನು ಎದುರಿಸಲಾರದ ಹೇಡಿತನವೊ ? ಶ್ರೀಧರನು–ತಾನು– ಮದುವೆಯನ್ನು ಮಾಡಿಕೊಂಡಿರಲಿಲ್ಲ....ಆದರೂ ಅನೇಕ ಗ್ರಂಥಗಳನ್ನು ಓದಿಕೊಂಡಿದ್ದಾನೆ. ತಜ್ಞರೆಂಬವರ ಅಭಿಪ್ರಾಯಗಳನ್ನು ತಿಳಿದುಕೊಂಡಿ ದ್ದಾನೆ. ಆದರೂ ರತಿ–ವಾಸನೆ (Sex-instinct) ಯ ಬಗ್ಗೆ ಇದ್ದ ಯಾವ ಧೋರಣೆಯೂ ಅವನ ಮನಸ್ಸಿಗೆ ಬಂದಿಲ್ಲ....ತನ್ನಷ್ಟಕ್ಕೆ ಮುಗುಳ್ನಗೆ ನಗುತ್ತ, ಗೋಡೆಗೆ ತೂಗಹಾಕಿದ ಭಾವಪಟಗಳನ್ನು ನೋಡುತ್ತ ಅತ್ತಿತ್ತ ಸುಳಿದಾಡತೊಡಗಿದನು....ತನಗೇಕೆ ಈ ವಿಚಾರ ? ತನ್ನ ವಯಸ್ಸು ಇದೇ ಳಂಕ್ಕೆ ಮಿಕ್ಕಿದೆ; ಸ್ತ್ರೀ ಸಹವಾಸವಿಲ್ಲ, ಮದುವೆ ಇಲ್ಲ....ಆಶ್ಚರ್ಯ !....ರತಿ ವಾಸನೆ ಪ್ರಾಣಿಗೆ ಸಹಜವಾಗಿದ್ದರೆ ತನ್ನ ಮನಸ್ಸು ಅತ್ತ ಧಾವಿಸದಿದ್ದುದು. ಆ ದೃಷ್ಟಿಯಿಂದ ತನಗೆ ಅತೃಪ್ತಿಯ ಭಾವನೆಯೆ ಇಲ್ಲವಲ್ಲ? ಇದು ಹೇಗೆ?. . ಅಥವಾ, ಕೆಲವು ತಜ್ಞರು ಹೇಳುವ ಮಾತೇ ನಿಜವೊ ? ರತಿವಾಸನೆ ಸಹಜ ವೆಂದರೆ ಇಂದ್ರಿಯ ಸುಖವೆ ಅಗತ್ಯ ಎಂದಲ್ಲ ಎಂಬುದು ? ಮನೆಮಾರನ್ನು ಬಿಟ್ಟು ತಾನೂ ಅವಿಶ್ರಾಂತವಾಗಿ ಒಂದು ವಿಧದ ನಿಸ್ವಾರ್ಥ ಸಾರ್ವಜನಿಕ ಸೇವೆಯಲ್ಲಿಯೆ ತೊಡಗಿಲ್ಲವೆ ?....ಆದರೆ ಅಂದಿನ ಮಾಧವನ ನಡತೆ ಬೇರೆ, ತನ್ನ ನಡತೆ ಬೇರೆ ಎಂದೆನ್ನಿಸಿತು ಶ್ರೀಧರನಿಗೆ. ತಾನು ಮಾಡಿದ್ದು ತಪ್ಪು ಎಂಬ ವಿಚಾರ ಒಂದುಕಡೆ, ಅದರಿಂದಲೆ ತನಗೆ ಸಮಾಧಾನ ಎಂಬ ವಿಚಾರ ಇನ್ನೊಂದು ಕಡೆ; ಇವೆರಡೂ ವಿಚಾರ ಪರಸ್ಪರ ವಿರುದ್ಧ ಎಂದು ತಿಳಿದು ಅವುಗಳ ತಾಕಲಾಟವನ್ನು ತಡೆಯಲಾರದ್ದಕೆ ಓಡಿಹೋದನು ಮಾಧವ... ಓ ಡಿ ಹೋ ದ . ಸಂದೇಹವೆ ಇಲ್ಲ ಇದರಲ್ಲಿ. ತನ್ನ ಹೇಡಿತನಕ್ಕಾಗಿ ಶೂರ ಸ್ವಯಂಸೇವಕನಾದ ಮಾಧವ !....'ಹಃ ! ' ತಿರಸ್ಕಾರದಿಂದ ಉಸಿರೆಳೆದ ಶ್ರೀಧರ. ನಿಜ...ಪಾರಾಗುವ ಹಂಚಿಕೆಯಿಂದಲೆ ಮಾಧವನು ಓಡಿಹೋದ....

ಶ್ರೀಧರನಿಗೆ ಸ್ಮರಣೆಯಾಯಿತು. ಆದಿನ ತಾನು ಮಗನ ಜನ್ಮ ಸ್ವರ್ಗಕ್ಕೆ ಪ್ರವೇಶಪತ್ರ ಎಂದಾಗ, ಸ್ವರ್ಗಕ್ಕಲ್ಲ, ಮೋಕ್ಷಕ್ಕೆ ಎಂದಿದ್ದ ಮಾಧವ... ಶ್ರೀಧರನ ಮುಖದಲ್ಲಿ ಮುಗುಳ್ನಗೆ ಮೂಡಿತು....ನಾಗಪುರದ ಧ್ವಜಸತ್ಯಾಗ್ರಹ ಮಾಧವನಿಗೆ ಮೋಕ್ಷವೆನ್ನಿಸಿತು.... ಥೂ! ಮಾಧವನಂತಹ ಸುಶಿಕ್ಷಿತನು, ಬುದ್ಧಿವಂತನು ಇಂತಹ ಕುರುಡ ಕಾಲ್ಪನಿಕ ದಂತಕತೆಗಳಿಗೆ ಮೋಸಹೋಗಬೇಕೆ?....ರತಿವಾಸನೆ ತಪ್ಪೆ, ಪಾಪವೆ? ಅದೂ ಮದುವೆಯ ಸಂಬಂಧದಲ್ಲಿ ಆಚರಣೆಗೆ ತಂದಾಗ?....ಮನುಷ್ಯನು ಕಾಡನಿವಾಸಿಯಾಗಿದ್ದಾಗ ಇರಬೇಕಾದ ವಿಚಾರ....ಶ್ರೀಧರನು ಒಮ್ಮೆಲೆ ತಡೆದನು...ಕಾಡನಿವಾಸದ ಸ್ಥಿತಿಯೆ ನಮ್ಮ ಸಮಾಜದಲ್ಲೂ ಇದೆ ಎಂದುಕೊಂಡನು. ಆ ಕಟ್ಟಡದಲ್ಲಿರುವ ಮಿಕ್ಕವರ ಜೀವನ ಅವನ ಸ್ಮರಣೆಗೆ ಬಂದಿತು. ಆ ಕೆಲಸ, ಆ ಕೂಳು, ಅಷ್ಟು ಮಕ್ಕಳು, ಅಂತಹ ಮನೆ! ಮೇಲೆ ಅಷ್ಟರಲ್ಲಿಯೆ ಸುಖ ಹಚ್ಚಿಕೊಂಡು ಆಹಾರ–ನಿದ್ರಾ–ಭಯ–ಮೈಥುನ ಎಂದು ಸಂಸ್ಕೃತ ಕವಿ ಹೇಳಿದಂತೆ ಪಶುಸಾಮಾನ್ಯ ಜೀವನವನ್ನು ನಡೆಸುವುದು... ಶ್ರೀಧರನು ಹಣೆಗೆ ಗಂಟುಕಟ್ಟಿ ಕೋಣೆಯಲ್ಲಿಯೆ ಬಂಧನದೊಳಗಿನ ಹುಲಿಯಂತೆ ಚಡಪಡಿಸುತ್ತಾಡಿದನು.... ಯಾಕೊ? ಇಂದು ಮಾಧವನ ವಿಚಾರ ಮನಸ್ಸನ್ನು ಒಂದೇಸವನೆ ಕೆರಳಿಸುತ್ತಿದೆ.... ಈಗಲೆ ಹೋಗಿಬಿಡೋಣವೆ ಅವನನ್ನು ಕಾಣಲಿಕ್ಕೆ–ಎಂದುಕೊಂಡನು... ಗೂಟಕ್ಕೆ ತಗುಲಿಸಿದ ಬಟ್ಟೆಗಳನ್ನು ದಿಟ್ಟಿಸಿದನು, ಆ ಕಡೆ ಒಂದು ಹೆಜ್ಜೆ ಇಟ್ಟನು. ಮತ್ತೆ ತಡೆದನು. ಬೇಡ... ಮೊದಲೇ ಗೊತ್ತಾದಂತೆ ೪ ಗಂಟೆಯ ಸುಮಾರಿಗೆ ಹೊರಬಿದ್ದು, ಏನಾದರೂ ಉಪಹಾರ ಮಾಡಿಕೊಂಡು ಸಾವಕಾಶ ಹೋದರಾಯಿತು. ಅಲ್ಲಿಯವರೆಗೆ ವಿಶ್ರಾಂತಿಯನ್ನಾದರೂ—ಎನ್ನುತ್ತ ಮತ್ತೆ ಬಂದು ಮಂಚದ ಮೇಲೆ ಒರಗಿಕೊಂಡನು.

. . . . .

೧೯೪೨ರ ಮೇ ತಿಂಗಳು. ಗಿಡದ ಗುಂಪಿನ ನಡುವಿದ್ದ ಒಂದು ಚಿಕ್ಕ ಮುರುಕ ಕಟ್ಟಡದ ಮುಂದಿನ ಕಟ್ಟೆಯ ಮೇಲೆ ಮಾಧವನು ಕುಳಿತಿದ್ದಾನೆ. ಒಳಗೆ ಚಿಕ್ಕ ಹುಡುಗರ ಗಲಾಟೆ ಕೇಳುತ್ತಿದೆ. ಶ್ರೀಧರನು ತುಸು ಸಿಟ್ಟಿನಿಂದಲೆ ಮಾಧವನನ್ನು ನೋಡುತ್ತಲಿದ್ದಾನೆ.

“ ನಿನ್ನ ಸಿಟ್ಟು ಹೋಯಿತಿಲ್ಲೊ ? ” ಎಂದ ಮಾಧವ.

" ಹುಂ " ಎಂದು ಶ್ರೀಧರನು ಹುಂಕರಿಸುವವನಂತೆ ಸದ್ದು ಮಾಡಿದನು.

" ಮುಂದಿನ ವಿಚಾರದಿಂದ ಇಂದಿನ ಒಳ್ಳೆಯ ಕೆಲಸ ಬಿಡಬೇಕೆನ್ನೋ ನಿನ್ನ ಹಟ ವಿಚಿತ್ರ ಕಾಣ್ತದ."

"ಅಹುದು. ಹಿಡಿದ ಕೆಲಸದ ಪರಿವೆ ಇಲ್ಲದೆ ತಿಂಡಿ ಬಿಟ್ಟಾಗ ತುರಿಸೋ ಹಾಂಗ ನಡೆಯೋ ನಿನ್ನ ಹಟ—? "

" ಯಾವಾಗ ಕಂಡೀದಿ ನನ್ನಲ್ಲಿ ಅಂತ ಹಟ ? ಆಂ ? " ಒತ್ತಾಯ ಪಡಿಸುವ ದನಿಯಿಂದ ಕೇಳಿದ ಮಾಧವ.

" ಕಂಡೀನಿ ಇಷ್ಟೇ ಅಲ್ಲ, ಉಂಡೀನಿ ಆ ಅನುಭವ. " ಶ್ರೀಧರನು ಕೆರಳಿದನು. " ಹೆಂಡತಿ-ಮಗನ ಪರಿವೆ ಇಲ್ಲದೆ ಓಡಿಹೋದ ನೀನು ಈ ಹರಿಜನ ಆಶ್ರಮ ನಡೆಸೋದು ಅಷ್ಟರೊಳಗೇ ಇದೆ. "

ಮಾಧವನು ನಕ್ಕನು. ಶ್ರೀಧರನು ತನ್ನ ಸಿಟ್ಟು ಇಳಿದಿಲ್ಲ ಎಂದು ತೋರಿಸಬೇಕೆಂದರೂ ಸಾಧ್ಯವಾಗಲಿಲ್ಲ. ಕ್ರಮೇಣ, ಮುಖದಲ್ಲಿ ನಗೆ, ದನಿಯಲ್ಲಿ ಸಿಡುಕು ಹೀಗಾಗಿ ತಾನೂ ಮಾಧವನೊಡನೆ ನಗಲೇಬೇಕಾಯಿತು. ನಿಜವಾಗಿ, ಶ್ರೀಧರನಿಗೆ ಒಳಗಿಂದೊಳಗೆ ಆನಂದವಿದ್ದಿತು. ಮಾಧವನು ಧ್ವಜ ಸತ್ಯಾಗ್ರಹದಲ್ಲಿ ಸೇರಲು ಹೋದಾಗ, ವಿಶೇಷವಾಗಿ ಮಾಧವನಿಗೆ ಆರು ತಿಂಗಳ ಶಿಕ್ಷೆ ಆಯಿತೆಂಬ ಸುದ್ದಿ ಬಂದಾಗ ಶ್ರೀಧರನು ಬಹಳೇ ಕಳವಳಗೊಂಡಿದ್ದನು. ಒಮ್ಮೆ ಜೇಲಿನಲ್ಲಿ ತನ್ನ ಗೆಳೆಯನು ಅನುಭವಿಸಿದ ಅವಸ್ಥೆಯನ್ನು ನೆನೆದು ಶ್ರೀಧರನು ಒಳಗಿಂದೊಳಗೆಯೆ ಗದಗದ ನಡುಗಿದ್ದನು. ದೇಹದ ಅನಾರೋಗ್ಯವಂತೂ ತಪ್ಪಿದ್ದಲ್ಲ. ಚಳವಳದಲ್ಲಿಯ ತರುಣರಿಗೆ ಆದಷ್ಟು ತೊಂದರೆ ಕೊಟ್ಟು ಅವರನ್ನು ಹಣ್ಣು ಮಾಡುವ ನಿಶ್ಚಿತ ಧೋರಣೆಯನ್ನು ಸರಕಾರವು ಆಚರಣೆಯಲ್ಲಿ ತಂದಿತ್ತು. ಅದು ಸರಕಾರಕ್ಕೆ ಅನಿವಾರ್ಯ ಎಂದು ಶ್ರೀಧರನು ತನ್ನ ತರ್ಕಬುದ್ಧಿಯಿಂದ ವಾದಿಸಿದ್ದನು. ದೇಶದ ತರುಣರು ಮಹಾತ್ಮರ ಚಳವಳಕ್ಕೆ ಎಷ್ಟು ಅಗತ್ಯವಾಗಿದ್ದರೂ ಅಷ್ಟೆ ಸರಕಾರದ ಆಡಳಿತೆಯಂತ್ರಕ್ಕೂ ಅಗತ್ಯರಾಗಿದ್ದರು. ತರುಣರು, ವಿಶೇಷವಾಗಿ ಸುಶಿಕ್ಷಿತರು ಚಳವಳವನ್ನು ಸೇರಿದರೆ ಸರಕಾರೀ ಕಚೇರಿಗಳಲ್ಲಿ ಸಣ್ಣ ಸಂಬಳದ ಮೇಲೆ ಕಾರಕೂನರಾಗುವವರಾರು? ಅದಕಾಗಿ ಸರಕಾರವು ಇತ್ತ ಜೇಲಿನಲ್ಲಿದ್ದ

ತರುಣರಿಗೆ ಪರಿಪರಿ ಬಾಧೆಯನ್ನುಂಟುಮಾಡುವುದು, ಅತ್ತ ಸರಕಾರೀ ನೋಕರಿಯಲ್ಲಿದ್ದ ಹಿಂದೀ ತರುಣರಿಗೆ ತುಸು ಮೇಲಿನ ಅಧಿಕಾರ ಪದವನ್ನು ಕೊಡುವುದು—ಈ ಧೋರಣೆಯನ್ನು ಕೈಕೊಂಡಿತ್ತು. ಆದ್ದರಿಂದ ಜೇಲಿಗೆ ಹೋದ ಮಾಧವನು ಹಲ್ಲು ಮುರಿಸಿಕೊಂಡು ಬರುವುದು ಖಂಡಿತ ಎಂದು ಶ್ರೀಧರನ ಅಂದಾಜು. ಆದರೂ ಮಾಧವನ ದೇಹದ ಅನಾರೋಗ್ಯಕ್ಕೆ ಶ್ರೀಧರನು ಅಷ್ಟು ಹೆದರಿದ್ದಿಲ್ಲ. ಕಳೆದ ಸಲ ಜೇಲಿನಿಂದ ಬಂದಾಗ ಮಾಧವನು ಮನಸ್ಸಿನಿಂದ ನಿರ್ವಿಣ್ಣನಾಗಿದ್ದನು, ಹತಾಶನಾಗಿದ್ದನು, ಜೀವನದಲ್ಲಿ ಆಸಕ್ತಿಯನ್ನು ಕಳೆದುಕೊಂಡಿದ್ದನು. ಈ ಸಲ ಅವನು ಹೋದದ್ದೂ ಪಶ್ಚಾತ್ತಾಪದ, ನಿರಾಶೆಯ, ನಿರ್ಬಲತೆಯ ಮನಃಸ್ಥಿತಿಯಲ್ಲಿ. ಈಗ ಆರು ತಿಂಗಳ ಸಶ್ರಮ ಶಿಕ್ಷೆ! ಶ್ರೀಧರನು ಒಳಗಿಂದೊಳಗೆಯೆ ಗೆಳೆಯನಿಗಾಗಿ ಗೋಳಾಡಿದ್ದನು. ಹೀಗಿರುವಾಗ, ಜೇಲಿನಿಂದ ಬಿಡುಗಡೆ ಹೊಂದಿ ಮಾಧವನು ನಗೆಮೊಗದಿಂದಲೆ ಮರಳಿ ಬಂದಿದ್ದನು. ಅವನನ್ನು ಮೊದಲು ನೋಡಿದಾಕ್ಷಣ ಶ್ರೀಧರನಿಗೆ ನಂಬುಗೆಯಾಗಲಿಲ್ಲ. ತಾನು ತಿಳಿದುಕೊಂಡ ಮಾಧವನ ಅವಸ್ಥೆ ಯಾವುದು? ಕಣ್ಣೆದುರು ಮೂರ್ತಿಮತ್ತಾಗಿ ನಿಂತ ಮಾಧವನ ಅವಸ್ಥೆ ಯಾವುದು? ನಿಜವಿರಬಹುದೆ? ಇವನೇ ಮಾಧವನೆ?

"ಯಾಕೊ? ಮಿಕಿಮಿಕಿ ಕಣ್ಣುಬಡೆಯುವೆ ಯಾಕೆ? ಹೆದರಿರುವೆಯಾ? ಗುರುತು ಹತ್ತಿರುವುದಿಲ್ಲವೆ?" ಎಂದು ನಗೆಯಿಂದ ಕೇಳಿದ್ದನು ಮಾಧವ.

ಆಗ ತನಗೆ ಮನಸ್ಸಿಗಾದ ಆನಂದವನ್ನು ಬಾಯಿಯಿಂದ ಆಡಿ ತೋರಿಸಿದಂತಾಗಿ ಒಮ್ಮೆಲೆ ಕಣ್ಣೀರು ಧಾರೆಯಾಗಿ ತಾನು ಮಾಧವನನ್ನು ಅಪ್ಪಿಕೊಂಡಿದ್ದ. ಮಾಧವನನ್ನು ನೋಡಿದಾಗೊಮ್ಮೆ ಅಂದಿನ ಆನಂದಾನುಭವ ಸ್ಮರಣೆಗೆ ಬರುತ್ತಿದ್ದಿತು....ಈಗಲೂ ಮಾಧವನನ್ನು ಎದುರು ಕಣ್ತುಂಬ ನೋಡುವಾಗ ಮುಖದ ಮೇಲೆ ಸಿಟ್ಟಿನ ಕಳೆ ಬಹಳೊತ್ತು ನಿಲ್ಲುವುದು ಶಕ್ಯವಾಗಲಿಲ್ಲ.

"ನಗಬೇಡ ನೀನು. ನೀನು ನಕ್ಕರೆ ನನಗೆ ಇನ್ನಿಷ್ಟು ಹೆದರಿಕೆಯಾಗುವುದು" ಕೆಟ್ಟಕೆಲಸ ಮಾಡಿದ ಮಗುವಿಗೆ ಸಿಟ್ಟು ಮಾಡುವವನ ದನಿಯಲ್ಲಿ

ಹೇಳಿದ ಶ್ರೀಧರ. "ನೀನು ನಕ್ಕೆ ಎಂದರೆ ನಿನ್ನ ಮನಸ್ಸಿನೊಳಗ ಮತ್ತೊಂದೇನೂ ವಿಚಾರ ಬಂದಿದೆ ಅಂತ ಹೆದರಿಕೇನೆ ಆಗೋದು ನನಗೆ."

"ಇನ್ನು ಯಾವ ಹೊಸ ವಿಚಾರನೂ ಶಕ್ಯ ಇಲ್ಲ. ಈ ಆಶ್ರಮ ಯಾವ ಮುಹೂರ್ತದೊಳಗ, ಯಾವ ಉದ್ದೇಶದಿಂದ ಪ್ರಾರಂಭ ಮಾಡಿದೆ ಅಂಬೋದು ನಾನು ಮರೀತೀನೇ ?"

"ಅನುಕೂಲ ಆದಾಗ ಬೇಕಾದ್ದನ್ನ ಮರೆಯುವವ ನೀನು ಅಂಬೋದು ನನಗ ನೆನಪಿನಲ್ಲಿಲ್ಲವೆ ?"

ಶ್ರೀಧರನು ಗೆಳೆತನದ ಮಾತಿನ ಮೋಜಿಗಾಗಿಯೆ ಹಾಗೆ ನುಡಿದಿದ್ದನು. ಈ ಸಲ ಮಾಧವನ ಮನಃಸ್ಥಿತಿಯಲ್ಲಿ ಏನೊ ಮಹತ್ತ್ವದ ವ್ಯತ್ಯಾಸವಾಗಿದೆ, ಯಾವುದೊ ಕಾರಣಕ್ಕಾಗಿ ಅವನ ಮನಸಿನಲ್ಲಿ ಶಾಂತಿ ಇದೆ ಎಂದು ಶ್ರೀಧರನು ಅಯ್ದು ತಿಂಗಳ ಹಿಂದೆ ಮಾಧವನು ತನ್ನೆದುರು ನಿಂತಾಗಲೇ ಕಂಡು ಹಿಡಿದಿದ್ದನು. ಮಾಧವನು ಬಿಡುಗಡೆ ಹೊಂದಿದ ಕಾಲಪರಿಸ್ಥಿತಿಯೂ ಹಾಗೇ ಇದ್ದಿತು. ಮೊದಲ ಸಲ ಮಾಧವನು ಜೇಲಿನಿಂದ ಬಂದೊಡನೆ ಮುಂಬಯಿಯಲ್ಲಿಯ ಕೊಲೆ-ಸುಲಿಗೆಗಳನ್ನು ಕಣ್ಣಾರೆ ಕಂಡಿದ್ದನು. ಈ ಸಲ ಅವನು ಪುಣೆಗೆ ಬರುವಷ್ಟರಲ್ಲಿ ಮಹಾತ್ಮರ ಬಿಡುಗಡೆಯ ಸುದ್ದಿಯನ್ನೆ ಕೇಳಿದ್ದನು. ಅವರ ಆರೋಗ್ಯ ಕೆಟ್ಟಿದೆ, ಶಸ್ತ್ರಕ್ರಿಯೆ ಅಗತ್ಯ, ಪರಿಸ್ಥಿತಿ ಚಿಂತಾಜನಕ ಮುಂತಾದ ಮೊದಲ ದಿನದ ಸುದ್ದಿಯನ್ನು (ಸುದೈವದಿಂದ) ಅವನು ಪ್ರವಾಸದ ಗಾಡಿಯಲ್ಲಿದ್ದುದರಿಂದ ಕೇಳಿರಲಿಲ್ಲ. ಕಲ್ಯಾಣ ಸ್ಟೇಶನದಲ್ಲಿ ಗಾಡಿ ಬದಲಾಯಿಸುವಾಗ ಬಿಡುಗಡೆ ಮತ್ತೆ ಯಶಸ್ವಿಯಾದ ಶಸ್ತ್ರಕ್ರಿಯೆ ಇದನ್ನೆ ಪತ್ರಿಕೆಗಳಲ್ಲಿ ಕಂಡಿದ್ದನು. ವೇಗದ ಗಾಡಿ ಕೂಡ ಅವನಿಗೆ ಸಾವಕಾಶವಾಗಿತ್ತು. ಮನಸ್ಸು ಪುಣೆಗೆ ಧಾವಿಸಿತ್ತು, ಪುಣೆಯಲ್ಲಿ ಗಾಡಿಯಿಂದ ಇಳಿದವನೆ ಓಡಿದನು. ಹತ್ತಿರದಲ್ಲಿ ಸಸೂನ್ ಆಸ್ಪತ್ರೆಯ ದೊಡ್ಡ ಬಯಲಿನಲ್ಲಿ ಒಂದು ಲಕ್ಷ ಜನ ಸೇರಿದ ಸಭೆಯ ದಿವ್ಯ ದೃಶ್ಯವನ್ನು ಕಣ್ಣಾರೆ ಕಂಡಿದ್ದನು. ಶ್ರೀನಿವಾಸ ಶಾಸ್ತ್ರಿಯವರ ಭಾಷಣ. ಅಂತಹ ಮಾತುಗಾರನಿಗೆ ಕೂಡ ಮಾತು ಬಾರದಾಗಿ ಲಕ್ಷ ಜನರೆದುರು ಅವನು ಬಿಕ್ಕಿ ಗದ್ಗದನಾಗಿ ಕುಳಿತ ದೃಶ್ಯ! ದೀನಬಂಧು ಆಂಡ್ರ್ಯೂಜರ ಬಾಯಿಯಿಂದ ಆಪರೇಶನದ ಆ ಅದ್ಭುತ ಕತೆಯನ್ನು ಕೇಳಿದ್ದು....ಅಂತೂ, ತನ್ನ ಗೆಳೆಯನಿಗೆ ಈ ಸಲ ಹುರುಪು ಕೊಡುವ

ಸಂನಿವೇಶಗಳೆ ಕಂಡದ್ದು ಒಳ್ಳೇದೇ ಆಯಿತು ಎಂದುಕೊಂಡಿದ್ದನು ಶ್ರೀಧರನು....ಮಾಧವನು ೩-೪ ದಿವಸ ಪುಣೆಯಲ್ಲಿಯೆ ಉಳಿದುಕೊಂಡನು. ಭಕ್ತಿ-ಆನಂದಗಳಿಂದ ಮಹಾತ್ಮರನ್ನು ಮಲಗಿಸಿದ ಕೋಣೆಗೆ ದಿನಾಲು ಎರಡೂ ಹೊತ್ತು ಭೆಟ್ಟಿ ಕೊಡುತ್ತಿದ್ದನು. ಒಂದು ಸಾಯಂಕಾಲ ಶ್ರೀಮತಿ ಕಸ್ತೂರಬಾ ಅವರು ಬಂದವರೊಡನೆ ನಗೆಯ, ಸೌಜನ್ಯದ ಮಾತುಗಳನ್ನಾಡುತ್ತ ಮಹಾತ್ಮರ ಕೋಣೆಯ ಬಾಗಿಲಲ್ಲಿ ಕುಳಿತಿದ್ದರು. ತುಸು ಜನಸಂದಣಿಯೂ ಕಡಮೆಯಾಗಿತ್ತು. ಮಾಧವನು ಧೈರ್ಯದಿಂದ ಮಾತನಾಡಿಸಿದನು, ಮಹಾತ್ಮರ ಕ್ಷೇಮ ಸಮಾಚಾರವನ್ನು ಕೇಳಿದನು.

"ನಿಮ್ಮೆಲ್ಲರ ಸದಿಚ್ಛೆಯ ಬಲದಿಂದ ಕ್ಷೇಮವಾಗಿದ್ದಾರೆ" ಎಂದರು ಶ್ರೀಮತಿ ಕಸ್ತೂರಬಾ ಅವರು.

ಮಾಧವನ ಮೈ ಜುಮ್ಮೆಂದಿತ್ತು. ಏನು ದನಿ! ಎಂತಹ ಸೌಜನ್ಯ! ಕರುಣಾರಸದ ಮೂರ್ತಿಯಾಗಿದ್ದಾಳೆ ಈ ಮಾತೆ—ಎಂದುಕೊಂಡ. ತುಸು ಧೈರ್ಯ ಬಂದಿತು. ಮಹಾತ್ಮರ ಸೇವೆಗಾಗಿ ತಾನು ಬೇಕಾದ್ದನ್ನು ಮಾಡಲು ಸಿದ್ಧ ಎಂದು ಅವರಿಗೆ ಹೇಳಿದನು.

"ದೇಶದ ಹರಿಜನರ ಸೇವೆ ಮಾಡಿದರೆ ಮಹಾತ್ಮರ ಸೇವೆ ಮಾಡಿದಂತೆ" ಎಂದರು ತಾಯಿಯವರು.

ಮಾಧವನು ತಲೆ ಬಾಗಿ ನಿಂತ. ಶ್ರೀಮತಿ ಆಶೀರ್ವದಿಸಿದರು.

ಊರಿಗೆ ಬಂದೊಡನೆಯೆ ತನಗೆ ಇದೆಲ್ಲವನ್ನೂ ಹೇಳಿ ಹರಿಜನ ಆಶ್ರಮವನ್ನು ಮಾಧವನು ಪ್ರಾರಂಭಿಸಿದನು. ಇದೆಲ್ಲವನ್ನು ಅರಿತೂ ಶ್ರೀಧರನು ಹಾಗೆ ಮಾತನಾಡಿದನು.

"ಅನುಕೂಲ ಎನಿಸಿದಾಗ ಬೇಕಾದ್ದನ್ನ ಮರೆಯುವವ ನೀನು ಅಂಬೋದು ನನ್ನ ನೆನಪಿನೊಳಗ ಇದೆ" ಎಂದು ಮತ್ತೊಮ್ಮೆ ಶ್ರೀಧರನು ಗೆಳೆಯನನ್ನು ಹಂಗಿಸಿದನು.

"ಅದಕ್ಕೇ ನಾನೂ ಹೇಳಿದೆನಲ್ಲ? ಈ ಕೆಲಸ ಎಂದರೆ ಅಂದು ಪುಣೆಯಲ್ಲಿ ಆ ದೇವತೆಯ ಸಾಕ್ಷಿಯಾಗಿ ಕೈಕೊಂಡ ಪ್ರತಿಜ್ಞೆಯಾಗಿದೆ" ಎಂದನು ಮಾಧವ.

"ದೇವ! ದೇವತೆ! ನಾತಿ ಚರಾಮಿ ಎಂದೂ ದೇವನ ಸಾಕ್ಷಿಯಾಗಿಯೆ ಹೇಳಿದ್ದೆಯಲ್ಲ, ಮರೆಯಬಾರದೆಂದು ನೂರು ಸಲ?"

ಈಗ ಮಾಧವನು ಗಟ್ಟಿಯಾಗಿ ನಕ್ಕನು. ಶ್ರೀಧರನಿಗೂ ಅದರ ಕಾರಣ ಹೊಳೆದಂತಾಯಿತು. ಮಾಧವನು ಮನೆಯನ್ನೂ ಮಡದಿಯನ್ನೂ ಬಿಟ್ಟು ಹೋದುದು ತನಗೆ—ಶ್ರೀಧರನಿಗೆ—ಇಷ್ಟೇಕೆ ಮಹತ್ತ್ವದ್ದೆನಿಸಿದೆ? ಎಲ್ಲಿ ಸುತ್ತಾಡಿದರೂ ಕೊನೆಗೆ ತನ್ನ ಅಭಿಪ್ರಾಯ ಅಲ್ಲಿಗೇ ಬಂದು ಮುಟ್ಟುವುದಲ್ಲ? ಇದೇ ಮಾತನ್ನು ಮಾಧವನು ಆಡಿ ತೋರಿಸಿದನು.

"ಅಲ್ಲೊ, ಶ್ರೀಧರಾ, ಎಂದೊ ಒಮ್ಮೆ ನಾನು ಮಾಡಿದ ಆ ಮಾತು ಇಷ್ಟು ನಿನ್ನ ಮನಸ್ಸನ್ನು ಭೇದಿಸಿರುವುದೆ? ಯಾವ ವಿಚಾರಕ್ಕಾಗಿಯೂ ನಿನ್ನ ಮನಸ್ಸನ್ನು ಮುಟ್ಟಬೇಕೆಂದರೆ ಅದೇ ಚುಚ್ಚುವುದಲ್ಲ ಕೈಗೆ? ಯಾರಾದರೂ ನನ್ನ ವಿರುದ್ಧ ದೂರು ಹೇಳಿರುವರೇನು ನಿನಗೆ?"

ಶ್ರೀಧರನ ಮನಸ್ಸು ಪೇಚಾಟದಲ್ಲಿ ಸಿಕ್ಕಿಕೊಂಡಿತು. ಕೊನೆಗೆ ತನ್ನ ಹಟಕ್ಕಾಗಿಯೆ ಈ ಪ್ರಸಂಗ ಬಂದಿತಲ್ಲ? ತಾನು ಮೇಲಿಂದ ಮೇಲೆ ಅದೇ ಮಾತನ್ನು ಆಡದಿದ್ದರೆ ಮಾಧವನು ಈ ಪ್ರಶ್ನೆಯನ್ನು ಕೇಳುತ್ತಿರಲಿಲ್ಲ. ಈಗ ಕೇಳಿದ್ದಾನೆ. ಸಮಾಧಾನದ ಉತ್ತರವನ್ನು ಹೇಳದ ವರೆಗೆ ಅವನೇನು ಬಿಡುವಂತಿಲ್ಲ.

"ಯಾಕೊ? ಏನಿದೆ ನಿನ್ನ ಮನಸಿನ ಸಂಶಯ?" ಹಟದಿಂದ ಕೇಳಿದನು ಮಾಧವ.

ಶ್ರೀಧರನಿಗೆ ಅನಿವಾರ್ಯವಾಯಿತು. ಇನ್ನು ಹೆಚ್ಚು ವಿಚಾರ ಮಾಡಿದರೆ ಮಾಧವನ ಸಂಶಯವು ಹೆಚ್ಚುವುದು. ಹೇಳಿಬಿಡುವುದೆ ಉತ್ತಮ. ಇದಲ್ಲದೆ, ಈಗಲೇ ಹೇಳದಿದ್ದರೆ ಮುಂದೆ ಹೆಚ್ಚಿನ ತೊಂದರೆಯಾಗಬಹುದು. ಮಾಧವನ ವಿಷಯದಲ್ಲಿ ಯಾವಾಗಲೂ ತಾನು ಮಾಡಬೇಕಾದ್ದನ್ನು ವೇಳೆಗೆ ಮಾಡಲಾರದಕ್ಕೆ ಇಂದಿನ ಅವಸ್ಥೆ ಒದಗಿದೆ ಎಂದು ಶ್ರೀಧರನ ಕುದಿ ಯಾವಾಗಲೂ ಇದ್ದೇ ಇದ್ದಿತು. ಏನೆ ಆಗಲಿ, ಈಗ ಎಲ್ಲವನ್ನೂ ಹೇಳಿಬಿಡಬೇಕು. ಅದು ಎಷ್ಟರ ಮಟ್ಟಿಗೆ ನಿಜ ಎಂಬುದನ್ನು ಅರಿತುಕೊಳ್ಳುವುದು ಮಾಧವನ ಕೆಲಸ. ಕೇಳಿದ್ದನ್ನಷ್ಟು ಹೇಳುವುದು ತನ್ನ ಕೆಲಸ. ಅದೂ ತನ್ನ ತಾಯಿ ಹೇಳಿರುವರೆಂದು ತನಗೆ ಅಷ್ಟು ವಿವಂಚನೆ ಆ ವಿಷಯವಾಗಿ. ತನ್ನ

ತಾಯಿಯಾದರೂ ಹಟದಿಂದಲೆ ಹೇಳಿದ್ದರು. ಹೆಣ್ಮಕ್ಕಳ ಗೋಳು ಗಂಡಸರಿಗೇನು ಗೊತ್ತು, ಮನೆಯ ಹೆಂಡತಿಯ ಕಾಳಜಿ ಮಾಡದಿರುವುದೊಂದು ಗಂಡನ ದೊಡ್ಡಿಸ್ತನ ಎಂದು ಗಂಡಸರ ಕಲ್ಪನೆ-ಎಂದು ಮುಂತಾಗಿ ಒಂದು ದೀರ್ಘ ಪ್ರಾಸ್ತಾವಿಕ ಉಪನ್ಯಾಸ ಕೊಟ್ಟು ಆ ಮೇಲೆ ಮಾಧವನ ಹೆಂಡತಿಯ ಆರೋಗ್ಯ ಎಳ್ಳಷ್ಟು ಸರಿ ಇಲ್ಲವೆಂದೂ ಕೂಡಲೆ ಯಾರನ್ನಾದರೂ ವೈದ್ಯರನ್ನು ಕೇಳಬೇಕೆಂದೂ ಇದರದೊಂದೂ ವಿಚಾರವಿಲ್ಲದೆ ಮಾಲೆ ಹಾಕಿಸಿಕೊಳ್ಳಲಿಕ್ಕೆ ಜೇಲಿಗೆ ಹೋಗುವ ಮಾಧವನು ಶುದ್ಧ ಹುಚ್ಚನೆಂದೂ ಜೇಲು ಅಷ್ಟು ಸೇರುತ್ತಿದ್ದರೆ ಜೇಲರನ ಮಗಳನ್ನೆ ಮಾಧವನು ಮದುವೆಯಾಗಬೇಕಿತ್ತೆಂದೂ—ಇನ್ನೂ ಅನೇಕ ಅಲಂಕಾರಗಳ ಶೈಲಿಯಲ್ಲಿ ತನ್ನ ತಾಯಿ ಹೇಳಿದ್ದನ್ನು ಶ್ರೀಧರನು ಗೆಳೆಯನ ಮನಸ್ಸಿಗೆ ನೋವಾಗದಂತೆ ಕೊನೆಗೆ ಹೇಳಿದನು.

"ಅದಕಾಗಿ ನನಗ ನೀ ಜೇಲಿಗೆ ಓಡಿಹೋದದ್ದರ ಸಿಟ್ಟು ಇದ್ದಿರಬೇಕು, ಅಂತೇ ಆ ಮಾತು ನನ್ನ ಮನಸಿನೊಳಗ ಅಷ್ಟೊಂದು ಗಟ್ಟಿಯಾಗಿ ಉಳಿದಿರಬೇಕು" ಎಂದ ಶ್ರೀಧರ ಕ್ಷಮಾಯಾಚನೆಯ ದನಿಯಲ್ಲಿ.

ಮಾಧವನು ಕೆಲಹೊತ್ತು ಮಾತನಾಡಲಿಲ್ಲ. ಶ್ರೀಧರನಿಗೂ ಏನು ಮಾತನಾಡಬೇಕೆಂಬುದು ತಿಳಿಯದಾಯಿತು. ಇಬ್ಬರೂ ಮೌನ ತಾಳಿರುವಾಗ ಒಳಗಿನಿಂದ ಚಿಕ್ಕಮಕ್ಕಳ ಗಲಾಟೆ ಗಟ್ಟಿಯಾಗಿ ಕೇಳಿಸತೊಡಗಿತು. ಕೊನೆಗೆ ಏನನ್ನಾದರೂ ಮಾತನಾಡಬೇಕೆಂದು ಶ್ರೀಧರನು "ಇದೇನು ? ಇಷ್ಟೇಕೆ ಗಲಾಟೆ ?" ಎಂದನು.

೧೬

. . . . .

ಶ್ರೀಧರನು ಕಣ್ದೆರೆದನು. ಗಲಾಟೆ ಕೇಳಬರುತ್ತಿದೆ. ಕಣ್ಣೊರೆಸಿಕೊಂಡನು. ತಾನು ಎಲ್ಲಿದ್ದೇನೆಂಬುದರ ಅರಿವು ತಪ್ಪಿದಂತಾಗಿ ಅತ್ತಿತ್ತ ನೋಡಿದನು. ನಿಜವಾಗಿಯೆ ಗಲಾಟೆ ಕೇಳಬರುತ್ತಿದೆ. ಆದರೆ ಅದು ಅಗಸ್ಟ ೧೫, ವರ್ಷ ೧೯೪೭, ವಸತಿ ಮುಂಬಯಿ ಪರೇಳ ಭಾಗದಲ್ಲಿಯ ಒಂದು 'ಚಾಳ,' ಗಲಾಟೆ ಕೂಲಿಕಾರರ ಹುಡುಗರದು; ತಾನು ಕೇಳಿದಂತೆ ಭಾಸವಾದ ಚಿಕ್ಕಮಕ್ಕಳ ಗಲಾಟೆ ಇಪ್ಪತ್ಮೂರು ವರ್ಷಗಳ ಮುಂಚಿನದು.

ಅರ್ಥಾತ್, ತಾನು ನಿದ್ದೆಹೋಗಿ ಕನಸನ್ನು ಕಂಡಿದ್ದಾನೆ. ಮಾಧವನನ್ನು ಮರೆತು ವಿಶ್ರಾಂತಿಯನ್ನು ಪಡೆಯಬೇಕೆಂದರೆ ನಿದ್ದೆಯಲ್ಲೂ ಅದೇ ಕನಸು. ಅಂತೂ ತಾನು ಬೆಳಗಿನಿಂದ ಹೊರಗೆ ಹೋಗಬಾರದೆಂದು ಹಟ ಹಿಡಿದು ಉಪವಾಸವಿದ್ದುದರ ಫಲವಿದು....ಮನುಷ್ಯನೆಂದರೆ ಚಟದ, ಅಭ್ಯಾಸದ ಪ್ರಾಣಿ; ಎರಡೊತ್ತು ಊಟದ ಚಟವಿದ್ದ ತನಗೆ ಒಂದು ಊಟ ತಪ್ಪಿದರೆ ಈ ಅವಸ್ಥೆ! ಎಚ್ಚರಿದ್ದರೆ ಹೊತ್ತು ಹೋಗುವುದಿಲ್ಲ, ಮಲಗಿದರೆ ಅರೆನಿದ್ದೆ.... ಮಂಚದ ಮೇಲೆ ಎದ್ದು ಕುಳಿತನು. ಮೇಜಿನ ಮೇಲಿನ ಗಡಿಯಾರದಲ್ಲಿ ಎರಡೂವರೆ ಆಗಿದೆ....ಅದಕ್ಕೆಂದೆ ಹೊರಗೆ ಹುಡುಗರ ಗಲಾಟೆ ಪ್ರಾರಂಭ ವಾಗಿದೆ....ಮಾಧವನ ವಸತಿಗೆ ಹೋಗಲು ಇನ್ನೂ ಕನಿಷ್ಠ ಮೂರು ತಾಸು ಗಳ ಅವಧಿ. ಮಾಧವ! ಮತ್ತೆ ಅದೇ ವಿಚಾರ. ಇಂದು ತನಗೆ ಅದೂ ಒಂದು ಚಟವೆ ಆದಂತಾಗಿದೆಯಲ್ಲವೆ?....ಅಥವಾ, ತನ್ನ ಮತ್ತು ಮಾಧವನ ಗೆಳೆ ತನದಲ್ಲಿಯೆ ಒಂದು ವಿಶೇಷವಿದೆ .. ಅಥವಾ, ಮಾಧವನು ಅಷ್ಟೊಂದು ವಿಚಿತ್ರ ಸ್ವಭಾವದವನೆ ಆಗಿದ್ದಾನೆ. ಎಂತಹ ಬುದ್ಧಿಶಕ್ತಿ! ಆದರೇನು? ದೇಶಕ್ಕೂ ಉಪಯೋಗವಿಲ್ಲ, ಸ್ವಂತಕ್ಕೂ ಉಪಯೋಗವಿಲ್ಲ! ಬುದ್ಧಿವಂತರ ಹಣೆಬರೆ ಹವೆ ಹೀಗೆ ಏನೊ! ಬುದ್ಧಿಶಕ್ತಿಯಿಂದ ಸ್ವತಂತ್ರ ವಿಚಾರ, ಅದನ್ನು ಮಿಕ್ಕ ವರು–ಸಾಮಾನ್ಯರು–ತಿಳಿದುಕೊಳ್ಳುವಷ್ಟರಲ್ಲಿ ಅದರ ಮುಂದಿನ ವಿಚಾರ; ಎಂದರೆ ಮಿಕ್ಕವರು ಹಿಂದೆಯೆ ಉಳಿಯುವರು, ತಾನು ಮುಂದೆ; ಅವರು ತನ್ನೊಡನೆ ಬರುವಷ್ಟರಲ್ಲಿ ತಾನು ಇನ್ನೂ ಮುಂದೆ. ಕೊನೆಗೆ ಮಿಕ್ಕವರ ಮಂದಗತಿಗೆ ಬೇಸತ್ತು ಹಿಂದೆ ನೋಡುವುದನ್ನೂ ಬಿಟ್ಟುಬಿಡುವುದು.... ಪಾಪ! ಮಾಧವನ ಅವಸ್ಥೆಯೂ ಹಾಗೇ ಆಯಿತು. ಅವನ ಬುದ್ಧಿವಂತಿ ಕೆಯೆ ಅವನಿಗೆ ಮುಳುವಾಯಿತು. ಆ ಬುದ್ಧಿವಂತಿಕೆಗಾಗಿಯೆ ಅವನು ಮೇಲಿಂದ ಮೇಲೆ ಬೇರೆ ಕೆಲಸಕ್ಕೆ ಕೈಹಾಕಿದನು, ಯಾವ ಕೆಲಸವನ್ನೂ ಸಂಘಟಿಸಲಿಲ್ಲ....ಸಾಮಾನ್ಯರ ಮುಂದಾಳಾಗಬೇಕಾದರೆ ಬುದ್ಧಿವಂತಿಕೆಯು ಉಪಯೋಗದ್ದಲ್ಲ. ಅದಕ್ಕೆ ಬೇಕು—.ಶ್ರೀಧರನು ಎದ್ದನು. ಇನ್ನು ಮಾಡುವು ದೇನು? ಹಿಂದಿನ ಸ್ಮರಣೆ ಸಾಕುಸಾಕಾಗಿ ಹೋಯಿತು....ಮುಂದಿನ ಯೋಜನೆಯನ್ನು ಮಾಡೋಣವೆ? ಈ ಸಾಯಂಕಾಲ ಮಾಧವನನ್ನು ಮಾತನಾಡಿಸಿ ನೋಡಬೇಕು. ಸ್ವರಾಜ್ಯವಂತೂ ಸಿಕ್ಕಿತಲ್ಲ? ಇನ್ನು ವಿಧಾಯಕ

ಕಾರ್ಯಕ್ರಮ ಸ್ವರಾಜ್ಯ ಸರಕಾರದ ಹೊಣೆ; ಲೆಕ್ಚರ ಕೊಡುವುದೂ ಅವರದೇ ಹೊಣೆ. ಎಂಗ ಮೇಲೆ ವಿಧಾಯಕ ಕಾರ್ಯಕರ್ತರೂ ಲೆಕ್ಚರದ ಚಳವಳಗಾರರೂ ನಿರುದ್ಯೋಗಿಗಳಾಗುವರಲ್ಲ? ತಾವು ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಎಂಬ ಹೆಮ್ಮೆಯಿಂದ ಮಿಕ್ಕವರೊಡನೆ ಬೆರೆತುಕೊಳ್ಳುವುದಿಲ್ಲ ಈ ಜನ. ಅಂತೂ, ಈ ಸ್ವಾತಂತ್ರ್ಯೋತ್ತರ ಹರಿಜನರಿಗಾಗಿ ಒಂದು ಆಶ್ರಮವನ್ನು ತೆಗೆಯಬಾರದೇಕೆ ? ಅವರ ನಿರುದ್ಯೋಗದಿಂದ ಉದ್ಧರಿಸಲಿಕ್ಕೆ ?

"ಹರಿಜನರ ಆಶ್ರಮ ತೆಗೆಯುವುದು ಅವರ ಉದ್ಧಾರ ಮಾಡಿ ಪುಣ್ಯಗಳಿಸಬೇಕೆಂದಲ್ಲ; ನಾವು ಮಾಡಿದ ಪಾಪಕ್ಕಾಗಿ ಪ್ರಾಯಶ್ಚಿತ್ತ ಎಂದು" ಎಂದಿದ್ದ ಮಾಧವ.

"ಹರಿಜನರನ್ನು ನಡೆಸಿಕೊಂಡ ರೀತಿ ಪಾಪದ್ದಾಗಿದ್ದರೆ, ಸಾಮಾನ್ಯವಾಗಿ ಹೆಂಗಸರನ್ನೂ ಹಾಗೇ ನಡಿಸಿಕೊಂಡಿದ್ದೆವಲ್ಲ? ಹೆಣ್ಮಕ್ಕಳ ಆಶ್ರಮವನ್ನೂ ಯಾಕೆ ತೆಗೆಯಬಾರದು ?" ಎಂದು ತಾನು ವಾದಿಸಿದ್ದ.

"ಸೇವಾಬುದ್ಧಿಯಿಂದ ಅದನ್ನೂ ಮಾಡಬಹುದು" ಎಂದು ತಲೆ ತೂಗಿದ ಮಾಧವ.

"ಒಂದು ಕಡೆ ಸೇವಾಬುದ್ಧಿ, ಇನ್ನೊಂದು ಕಡೆ ಪ್ರಾಯಶ್ಚಿತ್ತಬುದ್ಧಿ; ಈ ಹೆಚ್ಚು-ಕಡಮೆ ಯಾಕೆ ?"

"ನಾನು ಈಗ ಪ್ರಶ್ನೆ ಕೇಳೋದನ್ನೆ ಬಿಟ್ಟೇನಿ. ಅಲ್ಲಿ ಪ್ರತಿಜ್ಞಾ ಹೊತ್ತೇನಿ. ನಮ್ಮ ನಾಯಕನ ಆಜ್ಞೆ ಅದು."

"ನಿಮ್ಮ ನಾಯಕನಿಗೆ ನೀನು ಕೇಳಬ್ಯಾಡ ಪ್ರಶ್ನೆ. ಆದರೆ ನಾನು ನಿನಗ ಕೇಳ್ತೇನಲ್ಲ, ಅದಕ್ಕಾದರೂ ಉತ್ತರ ಕೊಡು."

"ನನ್ಮಟ್ಟಿಗೆ ನಾನು ವಿಚಾರ ಮಾಡೋದನ್ನೆ ಬಿಟ್ಟೇನಿ" ಎಂದು ಮಾತು ಮುಗಿಸುವ ದನಿಯಲ್ಲಿ ನುಡಿದ ಮಾಧವ.

"ಸರಿ. ತಲೆಯ ಮ್ಯಾಲಿನದು ತೆಗೆದೊಗೆಯೋದು ಅವಿಧೇಯತನ, ತಲೀನ್ನೆ ತೆಗೆದೊಗೆಯೋದು ವಿಧೇಯತನ" ತಾನು ಎಷ್ಟೊಂದು ಚುಚ್ಚಿದರೂ, ಕೆಣಕಿದರೂ ಮಾಧವನು ಕದಲಲಿಲ್ಲ.

"ನೀನು ಬೇಕಾದ್ದನ್ನು. ವಿಚಾರ ಮಾಡೋ ಕೆಲಸ ನಾಯಕನದು, ವಿಧೇಯರಾಗಿರೋ ಕೆಲಸ ನಮ್ಮದು" ಎಂದು ನಗೆಯಿಂದಲೇ ನುಡಿದ ಮಾಧವ.

"ಅಂದ್ರೆ ಮುಂದಿನ ಪೀಳಿಗೆಯಲ್ಲಿ ನಾಯಕರಾಗುವವರಿಗೆ ಸ್ವಂತದ ವಿಚಾರಶಕ್ತಿನೇ ಇಲ್ಲ ಅನ್ನು."

. . . . .

ಶ್ರೀಧರನು ಎದ್ದ. ಮೈಮುರಿದುಕೊಂಡ. ಆಕಳಿಸಿದ. ಮುಗುಳ್ನಗೆ ಮೂಡಿತು ಅವನ ಮುಖದಲ್ಲಿ. ಚಿಕ್ಕವರಿದ್ದಾಗ ತಾವು ಎಂತೆಂತಹ ಮಾತು ಗಳನ್ನಾಡಿದ್ದರು! ದೊಡ್ಡ ದೊಡ್ಡ ತತ್ತ್ವಗಳನ್ನು ಚರ್ಚಿಸಿದ್ದರು. ಈಗ ನೆನೆದರೆ ಅದೆಲ್ಲ ಬರೀ ಹರೆಯದ ಒಣಹುರುಪು ಎನ್ನಿಸುವುದು....ಆದರೂ ಕೆಲಕೆಲವು ಮಾತುಗಳು ಇಂದಿನ ಪ್ರಸಂಗಕ್ಕೆ ಸಾರ್ಥಕ ಎನ್ನಿಸುವವಲ್ಲ? ಮುಂದಿನ ಪೀಳಿಗೆಯ ನಾಯಕರಿಗೆ ಸ್ವಂತದ ವಿಚಾರವಿಲ್ಲ ಎಂದು ತಾನು ಆಗ ಅಂದದ್ದು ಇಂದು, ಗಳಿಗೆರಲ್ಲಿ, ನಿಜ, ಸಾರ್ಥಕ ಎನ್ನಿಸುವುದು. ಯಾರಿದ್ದಾರೆ ಸ್ವತಂತ್ರ ವಿಚಾರಶಕ್ತಿಯವರು? ಇದ್ದ ವಿಚಾರಗಳನ್ನು ತಿಳಿದುಕೊಳ್ಳುವ ಶಕ್ತಿ ಕೂಡ ಇಲ್ಲ ಇವರಿಗೆ, ಇನ್ನು ಸ್ವತಂತ್ರ ವಿಚಾರ ಎಲ್ಲಿಂದ ಬಂದೀತು? ಹಿಂದು-ಮುಸಲ್ಮಾನ ಐಕ್ಯ ಎಂದರು, ಪಾಕಿಸ್ತಾನದ ಬೇಡಿಕೆ ಅಸಂಬದ್ಧ ಪ್ರಲಾಪ ಎಂದರು. ಹಿಂದುಸ್ತಾನವು ಎಂದಿಗೂ ಒಂದು ದೇಶ ಎಂದು ಗರ್ಜಿಸಿದರು, ಕೊನೆಗೆ ಹಿಂದುಸ್ತಾನವನ್ನು ಸ್ವಸಂತೋಷದಿಂದ ಹರಿದುಹಂಚಿಕೊಂಡರು! ಅದೂ ಹೋಗಲಿ, ಮುಂದಾಳುತನದ ಹೊಣೆ ಗಾರಿಕೆಯಾದರೂ ಇರಬಾರದೇ? ವಿಚಾರ ಬಂದಂತೆ 'ವವ್' ಎಂದರು; ವಿಚಾರ ಬದಲಾದಂತೆ ಕಾಲೊಳಗೆ ಬಾಲ ಸಿಕ್ಕಿಸಿಕೊಂಡರು.

. . . . .

ಮಾಧವನ ಹಣೆಬರೆಹ ಬಹಳೇ ಕನಿಕರದ್ದಾಗಿತ್ತು. ಹರಿಜನ ಆಶ್ರಮ ವನ್ನು ಪ್ರಾರಂಭಿಸುವಾಗ ಮುಂದಾಳಿಗೆ ವಿಧೇಯತನ ಎಂದು ತನ್ನೊಡನೆ ವಾದಿಸಿದ್ದರೂ ಕ್ರಮೇಣ ಅನುತ್ಸಾಹದ ನೆರಳು ಮಾಧವನ ಕೆಲಸದ ಮೇಲೆ ಬೀಳತೊಡಗಿತು. ಶ್ರೀಧರನಿಗೆ ಇದೊಂದು ಆಶ್ಚರ್ಯ .. ಬುದ್ಧಿವಂತನಾದ ಮಾಧವನು ಪ್ರಾರಂಭಕ್ಕೆ ವಿಚಾರವನ್ನೆ ಮಾಡುತ್ತಿರಲಿಲ್ಲ, ಕ್ರಮೇಣ ಮುಂದಾಳಿನ ಆಜ್ಞೆಯನ್ನು ಒಂದೊಂದಾಗಿ ವಿಮರ್ಶಿಸುವುದು, ಆ ಮೇಲೆ ತನ್ನ ವಿಚಾರ ಬೇರೆಯೆ ಇದೆ ಎಂಬುದನ್ನು ಕಂಡುಹಿಡಿಯುವುದು, ಕೊನೆಗೆ ಮುಂದಾಳಿನ ಮಾತಿನ ವಿರುದ್ಧ ಹೋಗುವುದಕ್ಕಿಂತ ಅದನ್ನು ಅಷ್ಟಕಷ್ಟೆ

ಬಿಟ್ಟುಕೊಟ್ಟು ಮತ್ತೊಂದು ಕೆಲಸವನ್ನ ಪ್ರಾರಂಭಿಸುವುದು! ಹರಿಜನ ಆಶ್ರಮದ ಕತೆಂರುದರೂ ಹಾಗೆಯೆ ಆಯಿತು. ಒಂದು ದಿನ ಮಾಧವನು ತಾನಾಗಿಯೆ ತನ್ನ ಅತೃಪ್ತಿಯನ್ನು ಸೂಚಿಸಿದನು.

"ಇದರ ಕೊನೆ ಎಲ್ಲಿ?" ಎಂದ ಮಾಧವ.

ಶ್ರೀಧರನಿಗೆ ಸಂದರ್ಭ ತಿಳಿದಿರಲಿಲ್ಲ. "ಈಗ ಯಾವುದು ಕೊನೆಗಾಣುವುದು?" ಎಂದು ನಗೆಯಾಡಿದನು.

"ಅಲ್ಲ, ಶ್ರೀಧರಾ, ನಾನು ದೀರ್ಘ ವಿಚಾರ ಮಾಡುತ್ತಲಿದ್ದೇನೆ—"

"ಹಾಗಾದರೆ ಮುಂದಿನ ಸ್ಟೇಶನ್ನದ ಟಿಕೆಟ್ಟನ್ನೆ ತೆಗೆಯೋಣ."

"ತಡೆಯೊ, ಶ್ರೀಧರಾ! ವಿಚಾರವನ್ನೂ ಮಾಡಬಾರದೇನು?"

"ಅಲ್ಲೊ, ಮಾಧವಾ, ಒಂದು ಕಡೆ ಹೇಳುವೆ ಮುಂದಾಳಿನ ಆಜ್ಞೆಯನ್ನು ಮೂಕನಾಗಿ ಪಾಲಿಸಬೇಕೆಂದು; ಇನ್ನೊಂದೆಡೆ ಎನ್ನುವೆ, ವಿಚಾರವನ್ನೂ ಮಾಡಬಾರದೇನು ಎಂದು? ಮಾಡಿದ ವಿಚಾರ ಮುಂದಾಳಿಗೆ ವಿರುದ್ಧ ಆದರೆ ಮೂಕ ಡಾಂಭಿಕನಾಗಿ ಹಾಗೇ ಸಾಗಿಸುವೆಯಾ?"

ಮಾಧವನು ನಕ್ಕನು. "ಶ್ರೀಧರಾ, ನಿನ್ನ ತರ್ಕಶಕ್ತಿಯ ಮುಂದೆ ಶಂಕರಾಚಾರ್ಯರ ತರ್ಕಶಕ್ತಿ ಕೂಡ ಝುಕ್ಕಿಸಿತು ನೋಡು. ಇದ್ದ ಜಗತ್ತು ಇಲ್ಲ ಎಂದು ಆ ಬ್ರಾಹ್ಮಣ ತರ್ಕ ಹೂಡಿದರೆ, ಇಲ್ಲದ ಜಗತ್ತು ಇದೆ ಎಂದು ವಾದಿಸುವವ ನೀನು!"

ಶ್ರೀಧರನು ಮಾತನಾಡಲಿಲ್ಲ. ತನ್ನ ಪ್ರಶ್ನೆಯಿಂದ ಮಾಧವನಿಗೆ ತೊಡಕು ಬಿದ್ದಿತು ಎಂಬದನ್ನರಿತನು ಅವನು. ಆಗಲಿ. ಅವನ ಮಾತನ್ನಾದರೂ ಮೊದಲು ಕೇಳಿಕೊಳ್ಳೋಣ ಎಂದು ಶ್ರೀಧರನು ಸುಮ್ಮನಾದನು.

"ಶ್ರೀಧರಾ, ಈ ಆಶ್ರಮದ ಕೆಲಸ ಬಿಡುವೆ ಎಂದು ನಾನು ಹೇಳುವುದಿಲ್ಲ. ಇದನ್ನು ಚನ್ನಾಗಿ ಮಾಡಬೇಕು ಎಂಬ ಹಟಕ್ಕಾಗಿ ಹೆಚ್ಚು ತಿಳಿದುಕೊಳ್ಳಲು ನನ್ನ ಯತ್ನ. ಹರಿಜನರ ಉದ್ಧಾರ ಮಾಡುವುದಾದರೆ ಹರಿಜನರಲ್ಲಿಯೆ ಪ್ರಚಾರ ಮಾಡುವುದು ಯೋಗ್ಯವೆ—ಎಂದು ನನ್ನ ಸಂದೇಹ. ಅವರನ್ನು ಕಲಿಸಬಹುದು, ಸುಧಾರಿಸಬಹುದು, ಅವರ ವಿಚಾರಸರಣಿಯನ್ನೂ ಬದಲಾಯಿಸಬಹುದು. ಆದರೂ, ಮಿಕ್ಕ ಸಮಾಜವು ಅವರನ್ನು ಮುಟ್ಟಲೇ ಬಾರದೆಂದು ಹಟ ತೊಟ್ಟರೆ ಅದಕ್ಕೆ ಯಾವ ಗತಿ? ಇದಲ್ಲದೆ, ಹರಿಜನರಲ್ಲಿ

ಈ ರೀತಿ ಪ್ರಚಾರ ಮಾಡುವುದೂ ಘಾತಕ ಎಂದು ಎನ್ನಿಸಹತ್ತಿದೆ ನನಗೆ. ತಾವೂ ಯೋಗ್ಯತೆಯನ್ನು ಸಂಪಾದಿಸಬೇಕು ಎಂಬುದರ ಬದಲು ತಮ್ಮಲ್ಲಿಯೆ ಯೋಗ್ಯತೆ ಇದೆ, ನಮ್ಮಲ್ಲಿ ಮಾತ್ರ ಇಲ್ಲ, ಅಜ್ಞಾನಪಾಲಕನಂತೆ ನಾವು ತಮ್ಮದನ್ನು ಎತ್ತಿಹಾಕಿದ್ದೇವೆ ಎಂದು ವಾದಿಸುವ ಬುದ್ಧಿ ಬರುತ್ತಲಿದೆ ಈ ಹರಿಜನರಿಗೆ....ಅದಕಾಗಿ ನನ್ನ ವಿಚಾರ."

ಶ್ರೀಧರನು ಸುಮ್ಮನಿದ್ದನು. ಮಾಧವನ ಮಾತಿನ ಸತ್ಯತೆಯ ಬಗ್ಗೆ ಅವನಿಗೆ ಸಂದೇಹವಿರಲಿಲ್ಲ, ಯಾಕೆಂದರೆ ಮಾಧವನ ಈ ಅನುಭವ ನಿಜ ಎಂಬುದನ್ನು ತಾನೂ ಅರಿತಿದ್ದನು. ಈಗ ಶ್ರೀಧರನಿಗೆ ಸಂದೇಹ ಬಂದುದು ಮಾಧವನ ಭವಿಷ್ಯತ್ತಿಗಾಗಿ. ಯಾಕೆಂದರೆ ಒಮ್ಮೆ ಹಿಡಿದ ಕೆಲಸಕ್ಕಾಗಿ ಸಂದೇಹ ಬಂದರೆ ಅದನ್ನು ಬಿಟ್ಟುಕೊಡಲು ತನ್ನ ಗೆಳೆಯನಿಗೆ ಬಹಳ ದಿನ ಬೇಕಾಗುತ್ತಿರಲಿಲ್ಲ ಎಂಬುದನ್ನು ಶ್ರೀಧರ ಪೂರ್ತಿಯಾಗಿ ಬಲ್ಲ.

ಆ ಸಂದರ್ಭ ಸಮೀಪದಲ್ಲಿಯೆ ಬಂದಿತು. ಅದಕ್ಕೊಂದು ಯೋಗ್ಯ ಅವಕಾಶವೂ ದೊರೆತಿತು. ಅದೆಂದರೆ ಅದೇ ವರ್ಷದ ಡಿಸೆಂಬರದಲ್ಲಿ ಕಾಂಗ್ರೆಸ ಅಧಿವೇಶನವು ಬೆಳಗಾವಿಯಲ್ಲಿ ಕೂಡಬೇಕಾದುದು. ಕೊನೆಗೊಮ್ಮೆ ಕರ್ನಾಟಕಕ್ಕೆ ಆ ಗೌರವ ದೊರೆತಿತ್ತು. ಎಂದ ಮೇಲೆ ಅಧಿವೇಶನವು ಅತ್ಯಂತ ಯಶಸ್ವಿಯಾಗುವಂತೆ ಪ್ರಯತ್ನಿಸುವುದು, ಸಹಕರಿಸುವುದು ಕನ್ನಡಿಗರ ಕರ್ತವ್ಯವಲ್ಲವೆ?

"ಕನ್ನಡಿಗ ಎಂದರೆ ಕನ್ನಡ ಬಲ್ಲವರೊ ಇಲ್ಲವೆ ಕರ್ನಾಟಕದಲ್ಲಿ ಮರಾಠಿಯನ್ನಾಡುವವರೊ ?" ಎಂದಿದ್ದ ಶ್ರೀಧರ.

"ಕನ್ನಡಿಗರೆಂದರೆ ನಮ್ಮವರು, ಇಷ್ಟೆ. ಕನ್ನಡ-ಮರಾಠಿ ಎಂಬ ಭೇದ ಕಟ್ಟಿಕೊಳ್ಳೋದು ಯಾಕೆ? ಇಂದಿಲ್ಲ ನಾಳೆ ಎಲ್ಲಾರೂ ಹಿಂದೀ ಭಾಷೆಯನ್ನೆ ಮಾತನಾಡುವವರು" ಎಂದು ಮಾಧವನು ಆ ವಾದವನ್ನು ಅಲ್ಲಿಗೆ ಮುಗಿಸಿದ್ದನು.

ಕೊನೆಗೆ ಮಾಧವನು ಅಧಿವೇಶನದ ಪೂರ್ವಸಿದ್ಧತೆಗೆ ಬೆಳಗಾವಿಗೆ ಹೊರಟೇಬಿಟ್ಟನು. ಆಶ್ರಮದ ಅವಸ್ಥೆ ಏನು? ಮಾಧವನಿಗೆ ಅದರ ಮಹತ್ತ್ವವೆ ಇದ್ದಿರಲಿಲ್ಲ. ಪ್ರತ್ಯಕ್ಷ ಮಹಾತ್ಮಾ ಗಾಂಧಿಯವರೆ ಬೆಳಗಾವಿಯ ಅಧಿವೇಶನದ ಅಧ್ಯಕ್ಷರಾಗುವರೆಂದು ಕೇಳಿದಂದಿನಿಂದ ಅವನಿಗೆ ಬೇರೆ ಯಾವ ವಿಷಯದ್ದೂ ಮಹತ್ವವಿರಲಿಲ್ಲ.

"ಶ್ರೀಧರಾ, ಈ ಆಶ್ರಮದ ತೊಡಕು ಸದ್ಯಕ್ಕೆ ಬೇಡ. ಯಾಕೆಂದರೆ, ಬೆಳಗಾವಿಯಲ್ಲಿ ಕಾಂಗ್ರೆಸು ಯಾವ ಕಾರ್ಯಕ್ರಮವನ್ನು ಕೈಕೊಳ್ಳುವುದೊ ನಿಶ್ಚಿತವಿಲ್ಲ. ಇದಲ್ಲದೆ ಮೋತಿಲಾಲ ನೆಹರು ಪಕ್ಷದವರೊಡನೆ ಮಹಾತ್ಮರ ಜುಹು ಸಂಧಾನವಾಗಿದೆ. ಯಾವುದೂ ನಿಶ್ಚಿತವಿಲ್ಲ. ಮುಂದೆ ನೋಡೋಣ" ಎಂದನು.

ಶ್ರೀಧರನು ಒಳಗಿಂದೊಳಗೆಯೆ ನಕ್ಕಿದ್ದನು. ತನಗೆ ಬೇಡಾದ್ದನ್ನು ಸಮರ್ಥಿಸಿಕೊಳ್ಳುವುದಕ್ಕೆ ಅಖಿಲಭಾರತ ರಾಜಕಾರಣದ ನೆವ! ಆದರೂ, ಒಂದು ಮಾತಿಗಾಗಿ ತನ್ನ ಗೆಳೆಯನ ಬಗ್ಗೆ ಶ್ರೀಧರನಿಗೆ ಆದರ ಹುಟ್ಟಿತು. ಬೇಡಾದ ಕೆಲಸವನ್ನು ಬಿಟ್ಟುಬಿಡುವ ಮಾಧವ. ಮಹಾತ್ಮರ ಆಜ್ಞೆ ಎಂಬ ನೆವದಿಂದ ಮನಸ್ಸಿನಲ್ಲಿ ಇಲ್ಲದ್ದನ್ನು ಮಾಡಲಾರ. ಕಾರ್ಯಪ್ರವೃತ್ತಿ ವಿಧಾಯಕ, ಮನಃಪ್ರವೃತ್ತಿ ವಿಘಾತಕ; ಈ ದಸೆಗೆ ಮಾಧವನು ಕೊನೆಯವರೆಗೂ ಇಳಿಯಲಿಲ್ಲ.

ಮುಂದೆ ಕಾಂಗ್ರೆಸಿಗರ ಅನುಭವ ಹೆಚ್ಚೆಚ್ಚು ಬಂದಂತೆ ಶ್ರೀಧರನಿಗೆ ಮಾಧವನ ಬಗ್ಗೆ ಆದರವೂ ಹೆಚ್ಚಿತ್ತು.

. . . .

## ೧೭

ಶ್ರೀಧರನು ತಲೆ ಜಾಡಿಸಿದನು....ಸಾಕಾಗಿ ಹೋಯಿತು ಈ ಸ್ಮರಣೆ.... ಗಡಿಯಾರವನ್ನು ನೋಡಿದನು. ಮೂರೂವರೆ ಗಂಟೆ ಆಗಿ ಹೋಗಿದೆ. ನಡೆ, ಹೊರಗೆ ಹೊರಡುವ ಹೊತ್ತೇ ಆಯಿತಲ್ಲ. ಇನ್ನು ಮಾಧವನ ಬಗ್ಗೆ ವಿಚಾರವಾದರೂ ಯಾಕೆ, ಹಿಂದಿನ ಸ್ಮರಣೆಯಾದರೂ ಯಾಕೆ? ಹಾಗೆ ನೋಡಿದರೆ, ಹೆಚ್ಚಿಗೆ ವಿಚಾರ ಮಾಡಲೇಬೇಕಿಲ್ಲ ತನಗೆ. ೧೯೨೫ರಿಂದ ಮುಂದೆ ಮಾಧವನೊಡನೆ ಸ್ನೇಹ ಮಾತ್ರ ಉಳಿಯಿತು, ಸಾಮರಸ್ಯ ಉಳಿಯಲಿಲ್ಲ. ಹಿಡಿದ ಕೆಲಸವನ್ನು ಕೊನೆಗಾಣಿಸಲಾರದ ಮಾಧವನ ಚಂಚಲ ಬುದ್ಧಿಗಾಗಿ ಶ್ರೀಧರನು ಹತಾಶನಾಗಿದ್ದನು. ಇತ್ತ ತನ್ನ ವಿಚಾರಸರಣಿಯಲ್ಲೂ ಬದಲಾವಣೆಯಾಗ ತೊಡಗಿತ್ತು. ಇದುವರೆಗೆ ಶ್ರೀಧರನಿಗೆ ತತ್ತ್ವದ ಹುಚ್ಚು ಬಹಳವಾಗಿತ್ತು, ಓದುವ ಚಟವೂ ಹೆಚ್ಚಿತು; ವಾದ, ತರ್ಕ, ತತ್ತ್ವಪ್ರತಿಪಾದನೆ,

ಟೀಕೆ ಇವುಗಳಲ್ಲಿಯೆ ಇದುವರೆಗೆ ಹೆಚ್ಚು ಪ್ರೀತಿ ಇದ್ದಿತು ತನಗೆ. ಮಾಧವ ನಿಂದ ಮಹತ್ಕಾರ್ಯವಾಗುವುದೆಂಬ ನಿರೀಕ್ಷೆಯೂ ತನ್ನ ನಿಷ್ಕ್ರಿಯತೆಗೆ ಕಾರಣವಾಗಿದ್ದಿತೇನೊ ?....ಅಂತೂ, ಮಾಧವನೊಡನೆ ಸಾಮರಸ್ಯ ತಪ್ಪಿ ದಂತೆ ತಾನೇ ಯಾವುದಾದರೊಂದು ಕಾರ್ಯದಲ್ಲಿ ತೊಡಗಬೇಕೆಂದು ಶ್ರೀಧ ರನ ಲವಲವಿಕೆ. ಯಾವ ಕಾರ್ಯ? ತಾನು ಕಲಿತ ವಿದ್ಯೆಗೆ ಶಕ್ಯವಾದು ದೆಂದರೆ ಕಲಿಸುವುದೊಂದೇ ಕಾರ್ಯ. ಮುಂಚೆ ಮಾಧವನೂ ತಾನೂ ಕೈಕೊಂಡಿದ್ದ ಹಳ್ಳಿಗರ ಶಿಕ್ಷಣಕಾರ್ಯವನ್ನು ಈಗ ತಾನೊಬ್ಬನೆ ಕೈಕೊಂಡನು. ಕ್ರಮೇಣ ಅದು ಕಠಿಣಕಾರ್ಯ ಎನ್ನಿಸಿತು. ಹಳ್ಳಿಗರಿಗೆ ಕಲಿಸುವುದೇನು ? ಕತೆ–ಕಾದಂಬರಿಗಳನ್ನು ಓದುವುದೆ ? ಶ್ರೀಧರನಿಗೆ ಈ ಸಂದರ್ಭದಲ್ಲಿ ಒಂದು ಮಹತ್ತ್ವದ ಶೋಧವನ್ನು ಕಂಡು ಹಿಡಿದ ಗೌರವ ದೊರೆಯಿತು (ಆ ಗೌರವ ತನಗೆ ತಾನೇ ಕೊಟ್ಟದ್ದು ). ಅದೆಂದರೆ ಎಂದಿ ನಿಂದಲೊ ನಡೆದು ಬಂದ ಸಂಸ್ಕೃತಿ ಎಂಬುದೊಂದು ಶಕ್ತಿ ಇದೆ! ಆ ಶಕ್ತಿ ಗಾಗಿಯೆ, ಪಟ್ಟಣದವರು ಕತೆ–ಕಾದಂಬರಿಗಳನ್ನು ಓದುವ ಆಸಕ್ತಿಯನ್ನು ಗಳಿಸಿದರೂ, ಹಳ್ಳಿಗರು ಮಾತ್ರ ಸಾಕ್ಷರತೆ ಇಲ್ಲದೆಯೂ ಬುದ್ಧಿವಂತರಾಗಿರು ತ್ತಿದ್ದರು. ಆದ್ದರಿಂದ ಅವರ ಅಭ್ಯಾಸ ಕ್ರಮವೆ ಬೇರೆಯಾಗತಕ್ಕದ್ದೆಂದು ತಿಳಿದನು. ಇದೇ ಸಂದರ್ಭದಲ್ಲಿ ಕನ್ನಡದ ಮಹತ್ತ್ವ ಅವನಿಗೆ ಹೊಳೆಯಿತು. ಸಂಪ್ರದಾಯದಿಂದ ನಡೆದು ಬಂದ ಹಳ್ಳಿಗರ ಕನ್ನಡ ನುಡಿಯಲ್ಲಿ ಹೊಸ ಹೊಸತನ್ನು ಸೇರಿಸಿಕೊಳ್ಳುವ, ಹೊಸಹೊಸತನ್ನು ವಿಂಗಡಿಸಿ ವ್ಯಕ್ತಪಡಿಸುವ ಶಕ್ತಿ ಇದೆಯಲ್ಲ ? ಇವರ ಶಿಕ್ಷಣದಲ್ಲಿ ಕನ್ನಡಕ್ಕೆ ಮೊದಲಿನ ಸ್ಥಾನವನ್ನೆ ಕೊಡಬೇಕಾಗುವುದು. ಮಾಧವನು ಅಂದು ಹಾಗೇಕೆ ಮಾತನಾಡಿದನು ? ಇಂದಿಲ್ಲ ನಾಳೆ ಎಲ್ಲರೂ ಹಿಂದೀ ಭಾಷೆಯನ್ನೆ ಕಲಿಯಬೇಕಾಗುವುದು ಎಂದ ನಲ್ಲ ? ಹಾಗಾಗಬಹುದೆ ? ಅಥವಾ—ಶ್ರೀಧರನಿಗೆ ಆ ಮಾತು ಶಕ್ಯವೆನ್ನಿಸ ಲಿಲ್ಲ. ಇತಿಹಾಸದ ಅನುಭವವೂ ಹಾಗಿರಲಿಲ್ಲ. ಯಾವ ಭಾಷೆಯನ್ನು ಕಲಿ ಸಿದರೂ ಹೊಸ ಭಾಷೆ ಜನಸಾಮಾನ್ಯ ಭಾಷೆಯಾಗುವುದಿಲ್ಲ, ಖಂಡಿತ; ಅದರಂತೆ ಕನ್ನಡ ಭಾಷೆ ಮರೆಯುವುದಿಲ್ಲ, ಇದೂ ಖಂಡಿತ. ಹಾಗಾ ದರೆ, ಮೊದಲಿನಿಂದಲೂ ಹೊಸ ಭಾಷೆಯನ್ನು ಕಲಿಯುವುದೂ, ಕಲಿ ಸುವುದೂ ತಪ್ಪು ! ಶ್ರೀಧರನಿಗೂ ಮಾಧವನಿಗೂ ಈ ಬಗ್ಗೆ ಕೊನೆಯವರೆಗೂ ತೀವ್ರ ಮತಭೇದ ಉಳಿಯಿತು. ಆ ವೇಳೆಯ ಮಟ್ಟಿಗೆ ಮಾಧವನಿಂದ ದೂರ

ವಾಗಲು ತನಗೆಷ್ಟು ನೋವಾಗಿತ್ತು ಎಂಬುದನ್ನು ಶ್ರೀಧರನು ಮರೆತಿರಲಿಲ್ಲ. ಇಷ್ಟೇಕೆ ? ಆಗಿನಿಂದ ತನಗೂ ಮಾಧವನಿಗೂ ಒಂದು ದಾರಿಯಾಗುವುದು ಶಕ್ಯ ತೋರಲಿಲ್ಲ. ಅದೇ ಕಾಲಕ್ಕೆ ಇನ್ನೊಂದು ಮಹತ್ತ್ವದ ಘಟನೆ ನಡೆದು ಹೋಗಿತ್ತು. ಇತ್ತ ಹಿಂದುಸ್ತಾನದಲ್ಲಿ ಗಾಂಧೀಜಿಯವರ ಬಿಡುಗಡೆಯಾದ ತಿಂಗಳಲ್ಲಿಯೆ ಅತ್ತ ರಶಿಯಾದಲ್ಲಿ ಕ್ರಾಂತಿಯ ಮೂಲಪುರುಷನಾದ ಲೆನಿನ್ ಎಂಬವನು ಮರಣಹೊಂದಿದ್ದನು. ಆಗ ಲೆನಿನ್‌ನ ಸಂಬಂಧವಾಗಿ ಪ್ರಕಟವಾದ ಸುದ್ದಿ ಮತ್ತು ಲೇಖಗಳಿಂದ ಶ್ರೀಧರನಿಗೆ ಒಮ್ಮೆಲೆ ತನ್ನ ಸಮಸ್ಯೆ ಬಿಟ್ಟಂತಾಯಿತು. ಬಡತನ, ಅಜ್ಞಾನ, ರಾಜ್ಯಾಧಿಕಾರದ ಮದಾಂಧತೆ, ಅನೇಕ ಜಾತಿಗಳು, ನೂರಾರು ಭಾಷೆಗಳು—ಇವೆಲ್ಲವನ್ನು ನೋಡಿದಾಗ ರಶಿಯಾದ ಸಮಸ್ಯೆ ಹಿಂದುಸ್ತಾನದ ಸಮಸ್ಯೆಯಂತೆಯೆ ಇದೆಯಲ್ಲ—ಎಂದು ಶ್ರೀಧರನಿಗೆ ಆಶ್ಚರ್ಯವಾಯಿತು. ಆದರೂ ಅಲ್ಲಿ ಕ್ರಾಂತಿ ಯಶಸ್ವಿಯಾಗಿದೆ, ಇಲ್ಲಿ ಮಾತ್ರ ಇನ್ನೂ ಗಾಂಧಿ-ನೆಹರುಗಳ ಜುಹುಸಂದಾನ ನಡೆದಿದೆ! ಒಂದು ಕ್ಷಣದಲ್ಲಿ ಶ್ರೀಧರನ ವಿಚಾರವು ಸ್ಮರಣೆಗೆ ತಾಕಿತು....ತಾನೂ ಇಂತಹದೇ ಒಂದು ಮಾತನ್ನು ಹೇಳಿದ್ದಿಲ್ಲವೆ?....ಸುಶಿಕ್ಷಿತರನ್ನು ನಂಬಿ ಕ್ರಾಂತಿ ಹೂಡುವುದು ತಪ್ಪು, ಹಳ್ಳಿಗರನ್ನು—ಸಾಮಾನ್ಯರನ್ನು—ಕೂಡಿಸಿಕೊಂಡರೇನೆ ಯಶಸ್ಸು ಶಕ್ಯ ಎಂದು? ಈಗ ಆ ಗೊಡವೆ ತನಗೇಕೆ? ಶ್ರೀಧರನು ಕನ್ನಡಿಗನಾದನು, ಕಮ್ಯುನಿಷ್ಟನಾದನು (ಈ ಹೆಸರುಗಳು ಆಗ ದೊರೆತಿರಲಿಲ್ಲ, ೮-೧೦ ವರ್ಷಗಳ ತರುವಾಯ ದೊರೆತವು). ತನ್ನವರನ್ನು ಸಂಘಟಿಸಬೇಕಾದರೆ ತನ್ನ ಭಾಷೆಯಲ್ಲಿ ಮಾತು, ತನ್ನ ಭಾಷೆಯಲ್ಲಿ ಬರೆವಣಿಗೆ ಅತ್ಯಗತ್ಯ ಎಂದುಕೊಂಡನು. ಮುಂದೆ ಎರಡೇ ವರ್ಷಗಳಲ್ಲಿ ಅದೇ ಕಾರಣಗಳಿಗಾಗಿ ಕರ್ನಾಟಕ ಪ್ರಾಂತ ನಿರ್ಮಾಣ ಅಗತ್ಯ ಎಂದುಕೊಂಡನು.

. . . . .

ಶ್ರೀಧರನು ಹೊರ ಹೊರಡಲು ಸಿದ್ಧನಾದನು. ಬೆಳಗಿನ ಒಂದೇಸವನೆ ಹಿಂದಿನ ಇತಿಹಾಸವನ್ನು ನೆನೆದುಕೊಂಡುದಕ್ಕೆ ತನಗೆ ಆಯಾಸವಾಗಿಲ್ಲ ಎಂಬುದನ್ನರಿತು ಆಶ್ಚರ್ಯಪಟ್ಟನು. ಇಷ್ಟಾದರೂ ಮಾಧವನೊಬ್ಬನೆ ತನಗೆ ಗೆಳೆಯ ಎಂದೂ ಅವನು ನೆನೆದುಕೊಂಡನು. ಅನಂತನಾಗಲಿ, ಹಮ್ಮೂನಾಗಲಿ ಆಗಾಗ ಭೆಟ್ಟಿಯಾಗುತ್ತಿದ್ದಾರೆ, ಕಾಲೇಜದ ನಾಲ್ವರೂ ಸಬ್ರಹ್ಮಚಾರಿಗಳು ಆಗಾಗ ಪರಸ್ಪರ ಸಂಪರ್ಕವನ್ನಿಟ್ಟುಕೊಂಡಿದ್ದಾರೆ, ನಿಜ. ಆದರೂ

ತನಗೆ ಮಾತ್ರ ಈಗ ಮಾಧವನೊಬ್ಬನೇ ಗೆಳೆಯ ಎಂಬುದೂ ನಿಜ. ಅನಂತನು ಆಯ್. ಸಿ. ಎಸ್. ಆಗಿದ್ದಾನೆ, ದೊಡ್ಡ ಅಧಿಕಾರಿಯಾಗಿದ್ದಾನೆ. ಹಮ್ಮೂನಂತೂ ಸದ್ಯಕ್ಕೆ ಕಾಂಗ್ರೆಸದಲ್ಲಿ ಮುಂದಾಳುತನಕ್ಕೆ ಉಮೇದ್ವಾರ; ಶಾಸನಸಭೆ ಸೇರಿ "ಆನರೇಬಲ್" ಆಗಿದ್ದಾನೆ. ಬಾಗಿಲ ಹತ್ತಿರ ಬಂದು ಕಾಲೊಳಗೆ ಚಪ್ಪಲಿಯನ್ನು ಹಾಕಿಕೊಳ್ಳುವಾಗ ಶ್ರೀಧರನು ಖೊಳ್ಳನೆ ಗಟ್ಟಿಯಾಗಿ ನಕ್ಕನು. ಹಮ್ಮೂ "ಆನರೇಬಲ್"! ಕೊನೆಗೆ, ಹಮ್ಮೂನಿಗೂ "Honour" ಕ್ಕೂ ಈ ರೀತಿ ಗಂಟು ಬಿದ್ದಿತು! ತನ್ನ ಜೀವನದಲ್ಲಿಯೆ "Honour" ಎಂಬುವದನ್ನು ತಪ್ಪಿಸಬೇಕೆಂದಿದ್ದ ಹಮ್ಮೂನಿಗೆ "ಆನರ್"ಉ ಅಂಟಿಕೊಂಡಿತು ಕೊನಗೆ....ನೋಡೋಣ, ಕೇಳೋಣ....ಅವನೂ ಬರುವನು, ಅನಂತನೂ ಬರುವನು ಮಾಧವನ ವಸತಿಗೆ. ಇಪ್ಪತ್ತೇಳು ವರ್ಷಗಳ ನಂತರ ನಾಲ್ವರೂ ಒಂದೆಡೆಯಲ್ಲಿ ಸೇರುವರು ಎಂಬ ಮಾತಿಗಾಗಿ ಶ್ರೀಧರನ ಮೈ ಜುಮ್ಮೆಂದಿತು; ಬಾಗಿಲ ತೆಗೆದುದಕ್ಕಾಗಿ ಒಮ್ಮೆಲೆ ಗಾಳಿಯಿಂದ ಹಾಗಾಯಿತೇನೊ ಎಂದುಕೊಂಡ....ವ್ಹರಾಂಡಾದಲ್ಲಿ ಬಡತನದ ತಾಂಡವ ನಡೆದಿದೆ....ಲಗಬಗೆಯಿಂದ ಕೋಣೆಯ ಬಾಗಿಲಿಗೆ ಕೀಲಿ ಹಾಕಿ ನಾತ ತಪ್ಪಿಸಲು ಉಸಿರು ತಡೆದವನಂತೆ ಎದೆಯುಬ್ಬಿಸಿ ಪಾವಟಿಗೆಗಳಿಂದ ಕೆಳಗೆ ಧಾವಿಸಿದ.

† † † †

## ೧೮

ಮಧ್ಯಾಹ್ನದ ಮೂರು ಗಂಟೆಯ ಸಮಯ. ಅದೇ ದಿನ, ಎಂದರೆ ೧೯೪೭ ಇಸ್ವಿಯ ಅಗಸ್ಟ ೧೫, ಶುಕ್ರವಾರ. ಅನಂತನು ತನ್ನ ವಿಶಾಲವಾದ ಮಲಗುವ ಕೋಣೆಯಲ್ಲಿ ಸೊಬಗಿನಿಂದ ಅಲಂಕೃತವಾದ ಮಂಚದಲ್ಲಿ ಮೇಲಕ್ಕೆ ಸರಿದು, ಒಂದು ಬದಿಗೆ ಆತುಕೊಂಡು ಕಾಲುಚಾಚಿ ಒರಗಿದ್ದಾನೆ. ಮಗ್ಗುಲಲ್ಲಿ ಒಂದು ಚಿಕ್ಕ ಮೇಜು. ಸಿಗರೇಟಿನ ಡಬ್ಬಿ, ರಕ್ಷಾಪಾತ್ರ (ash-tray), ಬರೆಯುವ ಸಲಕರಣೆಗಳು, ಟಾಯಿಮ್ಸ್ ಆಫ್ ಇಂಡಿಯಾ ಪತ್ರಿಕೆ, ಕೆಲವು ಫೈಲುಗಳು—ಮೇಜಿನ ಮೇಲೆ ಇವೆ. ಆದರೆ ಅನಂತನ ಲಕ್ಷ್ಯ ಆಕಾಶದ ಕಡೆಗೆ. ಬಾಯಲ್ಲಿ ಸಿಗರೇಟನ್ನಿಟ್ಟು ಮುಖ ಮೇಲೆ ಮಾಡಿಕೊಂಡು ತೆರೆದ ಕಣ್ಣುಗಳಿಂದ ಧೇನಿಸುತ್ತ ಕುಳಿತಿದ್ದಾನೆ. ಕಣ್ಣುಗಳಿಂದಲೇ ಧೇನಿಸುತ್ತಿದ್ದಾನೆನ್ನಬಹುದಾಗಿದೆ. ಯಾಕೆಂದರೆ ಆಗಾಗ ಆ ಕಣ್ಣುಗಳಲ್ಲಿಯ ನೋಟ ಬದಲಾಯಿಸುತ್ತಲಿದೆ, ಬೇರೆ ಬೇರೆ ಭಾವನೆಗಳು—ರಜತಪರದೆಯ ಮೇಲೆ ಗೊಂಬೆಗಳಂತೆ—ಅಲ್ಲಿ ತಮ್ಮ ಆಟವನ್ನು ಆಡುತ್ತಿವೆ. ಇಂದು ಬೆಳಗಿನಿಂದಲೂ ಅನಂತನು ತುಸು ಸಿಡುಕಿನಿಂದಲೆ ಜಗತ್ತನ್ನು ನೋಡುತ್ತಲಿದ್ದಾನೆ.

ಮೊದಲಿಗೆ ಇಂದು ಇಡಿಯ ದಿನ ರಜೆಯಾಗಿದ್ದುದೆ ಅವನ ಮನಸ್ಸಿಗೆ ಬಂದಿಲ್ಲ. ಸಾರ್ವಜನಿಕ ರಜೆಯಂತೆ! What stupid sentimentality! ಮೊದಲೇ ಆಫೀಸಿನಲ್ಲಿ ಕೆಲಸವಾಗುತ್ತಿಲ್ಲ; ಅದರಲ್ಲಿ ಇತ್ತೀಚಿನಿಂದ ಈ ಹಾಳು ಕ್ಲಾರ್ಕರ ಉದ್ದಾಮತನ!.... ಮಾತು ಮಾತಿಗೆ ಮುಷ್ಕರ (ಸಂಪು)ದ ಹೆದರಿಕೆ....ಇಂತಹ ಸಮಯದಲ್ಲಿ ಸಾರ್ವಜನಿಕ ರಜೆ ಕೊಡುವುದೆಂದರೆ—Sheer pandering to the vulgar taste!

ಹಹ! ನಿಜವಾಗಿಯೆ ಮೋಜಿನ ವಿಚಾರ. ಇಂದಿನಿಂದ ತನ್ನಂತಹರೆಲ್ಲರೂ ಮುಷ್ಕರದ ಹೆದರಿಕೆಯನ್ನು ಹಾಕಿದರೆ? ನಿಂತೇ ಹೋಗುವುದು ಸ್ವತಂತ್ರ ಸರಕಾರ....ಯಾರಿದ್ದಾರೆ ಆಡಳಿತೆಯ ಅನುಭವವಿದ್ದವರು? ಇಂಗ್ಲಿಶ ಜನರು ಜಾರಿಕೊಂಡರು; ಉಳಿದವರಲ್ಲಿ ಹೆಚ್ಚು ಜನ ಪಾಕಿಸ್ತಾನ

ಸೇರಿದರು, ಅಲ್ಲಿ ಸಂಬಳ ಹೆಚ್ಚು. ಆದ್ದರಿಂದ ತನ್ನಂತಹ ಸೀನಿಯರ ಅಧಿಕಾರಿಗಳು ಬಿಟ್ಟು ಬಿಡುವ ಹೆದರಿಕೆಯನ್ನು ಹಾಕಿದರೆ ಮೊಳಕಾಲೂರಿ ಮುಷ್ಟಿ ಮುಷ್ಟಿ ಸಂಬಳ ಕೊಡುವರು. ೮-೧೧ ಹುಡುಗರನ್ನು ಕಲಿಸುವ ಶಾಳೆಯ ಮಾಸ್ತರನಿಗೆ ೪೦ ರುಪಾಯಿಯಂತೆ! ಅದೇ ೮-೧೦ ಲಕ್ಷ ಜನರುಳ್ಳ ಜಿಲ್ಲೆಯ ಅಧಿಕಾರಿಗೆ ಎರಡೇ ಸಾವಿರ ಅಂತೆ! ಈ ಮಾತನ್ನು ಅನಂತನು ಅನೇಕ ಸಲ ಆಡಿ ತೋರಿಸಿದ್ದನು, ಯಾರಿಂದಲೂ ಸಮಾಧಾನಕಾರಕ ಉತ್ತರ ದೊರೆತಿರಲಿಲ್ಲ ಎಂದು ಅವನ ತಕರಾರು....ನಮ್ಮ ಜನರಾದರೂ ಅಂತಹರೆ....ಯುರೋಪಿಯನ್‌ನಿಗೆ ಹೆಚ್ಚು ಪಗಾರ ಕೊಡಲು ಅಡ್ಡಿ ಇಲ್ಲವಂತೆ, ಅದೇ ಹುದ್ದೆಯ ದೇಶೀಯನಿಗೆ ಮಾತ್ರ ಕಡಮೆ ಪಗಾರವಂತೆ!....ಯಾ-ಆ-ಕೊ? ಅದರ Psychological effect-ಏನು-ಎಂಬುದು ತಿಳಿದಿದೆಯೆ ಇವರಿಗೆ?....ಯುರೋಪಿಯನ್‌ರಿಗಿಂತ ನಮ್ಮವರು ಕಡಮೆ ಎಂದು ಜನರ ಮನಸ್ಸಿನಲ್ಲಿ ಖಂಡಿತವಾಗಿ ಭಾವನೆ ಮೂಡುವುದು. ಮೇಲೆ, ಇನ್ನು ನಾವು ಸ್ವತಂತ್ರ ಎಂಬ ಹೆಮ್ಮೆ! ಎಂತಹ ಸ್ವಾತಂತ್ರ್ಯ?

ಅನಂತನು ಸಿಗರೇಟನ್ನು ರಕ್ಷಾಪಾತ್ರೆಯಲ್ಲಿ ಬಿಸುಡಿದನು, ಮತ್ತೊಂದನ್ನು ಹೊತ್ತಿಸಿದನು. ತಾನು ಮೂರು ವರ್ಷಗಳನ್ನು ಸ್ವಚ್ಛಂದನಾಗಿ ಕಳೆದ ಇಂಗ್ಲಂಡದ ಅನುಭವ ಅವನ ಸ್ಮರಣೆಗೆ ಬಂದಿತು. ಅದಕ್ಕೆನ್ನಬೇಕು ಸ್ವತಂತ್ರ ದೇಶ....ಜನರ ಶಿಕ್ಷಣವೆಂತಹದು! ಸಂಘಟನೆ ಎಂತಹದು! ಸ್ವಚ್ಛತೆ ಆರೋಗ್ಯಗಳ ಬಗ್ಗೆ ಅವರ ಕಲ್ಪನೆ ಏನು! ಮನುಷ್ಯನಾಗಿ ಜೀವಿಸುವುದು ಸಾರ್ಥಕ ಎಂದೆನ್ನಿಸುತ್ತಿತ್ತು ಅಲ್ಲಿ. ಅಲ್ಲಿಯ ಒಂದು ಸಾಮಾನ್ಯ ಕುಟುಂಬ, ಇಲ್ಲಿಯ ಒಬ್ಬ ಸುಶಿಕ್ಷಿತನ ಕುಟುಂಬ-ಎರಡನ್ನೂ ಹೋಲಿಸಿದಾಗ ಅನಂತನಿಗೆ ನಾಚಿಕೆಯಾಗುತ್ತಿತ್ತು. ನಮ್ಮ ಮನೆ, ನಮ್ಮ ಬಟ್ಟೆ, ಇಡುವ-ಇರುವ ರೀತಿ, ಮಲಗುವ ವ್ಯವಸ್ಥೆ, ಮಕ್ಕಳ ಕಾಳಜಿ— Oh, God! There's simply no comparison! ಎನ್ನುತ್ತಿದ್ದ ಅನಂತ. ಕೆಸರ ಕೆರೆಯಲ್ಲಿ ಹೊರಳಾಡಲು ಎಮ್ಮೆ ಸ್ವತಂತ್ರವಾದಂತೆ ಇಂಡಿಯಾ ಸ್ವತಂತ್ರ!....ಜಿನ್ನಾ ಜಾಣ! ....Cute fellow! ಈ ಮಡಿ-ಮೈಲಿಗೆ-ಸ್ಪೃಶ್ಯಾಸ್ಪೃಶ್ಯ ಎನ್ನುವವರ ಮೈಲಿಗೆಯೆ ಬೇಡ ತನ್ನ democracy ಗೆ ಎಂದ....ಹಹಹಹ! ವಂದೇಮಾತರಂ ಇದು ಎರಡು ಭ್ರಾತರಂ ಆಯಿತು! ಹಹ! ....

ನಗೆಗೂ ಸಿಗರೇಟಿಗೂ ಹೊಂದಿಕೆಯಾಗಲಿಲ್ಲ. ಅನಂತನು ಗಂಟಲು ಕೆರೆಯುವಂತೆ ಕೆಮ್ಮಿದನು. ಹೊಗೆ ತಾಕಿ ಕಣ್ಣಲ್ಲಿ ನೀರು ಬಂದಿತು. ಅನಂತ ಬಲಗೈಯಿಂದ ಸಿಗರೇಟನ್ನು ಬಿಸುಡುತ್ತ, ಎಡಗೈಯಿಂದ ಕಣ್ಣನ್ನು ಒರೆಯಿಸಿಕೊಳ್ಳುವಾಗ ಕೈಗಡಿಯಾರದಲ್ಲಿ ಮೂರು ಹೊಡೆದುದು ಲಕ್ಷ್ಯಕ್ಕೆ ಬಂದಿತು. ಮೆಲ್ಲಗೆ ಸರಿದು ಕುಳಿತುಕೊಂಡ, ಏಳಬೇಕೆಂದ, ಕೊನೆಗೆ ಕೆಳಗೆ ಕಾಲು ತೂಗಬಿಟ್ಟು ಬಲಮೊಳಕೈಯಿಂದ ಮಂಚದ ತುದಿಗೆ ಆತುಕೊಂಡು ಅಲ್ಲಿಯೆ ಕುಳಿತ....ಮುಖ್ಯ, ತಾನು ಹಿಂದುಸ್ತಾನಕ್ಕೆ ಮರಳಿದ್ದೇ ತಪ್ಪಾಯಿತೇನೊ? ಇಲ್ಲಿ ಬಂದೊಡನೆಯೆ ಜಾತಿ–ಧರ್ಮ–ಮೊದಲಾದ್ದು ಬೆನ್ನಿಗೆ ಗಂಟೇ ಬೀಳುವುದು. ಇಲ್ಲವಾದರೆ ತಾನೂ ಪಾಕಿಸ್ತಾನಕ್ಕೆ ಹೋಗಿಬಿಡುತ್ತಿದ್ದ. ತನಗೆ ಈಗಲಾದರೂ ಹೋಗಲು ನಿರ್ಬಂಧವಿಲ್ಲ, ನಿಜ. ಆದರೆ—ತಾನು ಹಾಗೆ ಪಾಕಿಸ್ತಾನ ಸೇರಿದರೆ—God forbid!–ಹಿಂದುಮುಂದಿನ ೨೧ ತಲೆ ರೌರವ ನರಕ!....ಅನಂತನಿಗೆ ಸಿಟ್ಟು ಬಂದಿತು....ಹುಬ್ಬುಗಂಟಿಕ್ಕಿದನು... ಸ್ವಾತಂತ್ರ್ಯವಂತೆ! ಬುದ್ಧಿವಂತನಿಗೆ ತನ್ನ ಬುದ್ಧಿಯ ಉಪಯೋಗವನ್ನು ತಾನು ತಿಳಿದಂತೆ ಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲ!....ತಾನು ಇಂಗ್ಲಂಡಕ್ಕೆ ಹೋಗುವಾಗ ದೇಶ ಸಹಾಯ ಮಾಡಿತೆ?....ಇಷ್ಟೇಕೆ, ಎಲ್ಲ ಕಡೆಯಿಂದಲೂ ಛೀಥೂ!....ತಿರುಗಿ ಬಂದ ಮೇಲೆ–? ದೇಶದ್ರೋಹಿ! ಈಗ ಮಾತ್ರ ದೇಶಕ್ಕಾಗಿ ತಾನು ಸ್ವಾರ್ಥತ್ಯಾಗವನ್ನು ಮಾಡಬೇಕಂತೆ! ದೇಶದ ಮಾತು ದೂರಿರಲಿ, ತನ್ನವರು ಕೂಡ ತನ್ನನ್ನು ಹಳಿದರು. ತನ್ನ ಗೆಳೆಯರು—ಓಹೊ! ಮಾಧವನು ಒಮ್ಮೆಲೆ ಕೈಗಡಿಯಾರವನ್ನು ನೋಡಿಕೊಂಡನು. 'ಗೆಳೆಯರು' ಎಂದ ಕೂಡಲೆ ಅವನಿಗೆ ಸ್ಮರಣೆಯಾಯಿತು. ಈ ಸಾಯಂಕಾಲ ಇಂತಹ ಒಬ್ಬ ಗೆಳೆಯನ ಕಡೆಗೆಯೆ ಹೋಗಬೇಕಾಗಿದೆ ತನಗೆ. ಈ 'ಎಂಗೇಜಮೆಂಟ'ನ್ನು ಯಾಕೆ ಒಪ್ಪಿಕೊಂಡೆನೊ?....ಇದ್ದ ೪–೬ ಗೆಳೆಯರಲ್ಲಿ ಇಂದು ಕಾಣಬೇಕಾದ ಗೆಳೆಯ ಅನಂತನಿಗೆ ಬೇಡಾಗಿದ್ದ. ಯಾಕೆಂದರೆ—

. . . . .

ಅನಂತನಿಗೆ ಇಂಗ್ಲಂಡನ್ನು ಮುಟ್ಟುವ ವರೆಗೆ ಅಧೈರ್ಯವಿದ್ದಿತು; ಎರಡು ಕಾರಣಗಳಿಗಾಗಿ. ಒಂದು, ಅರಿಯದ ದೇಶಕ್ಕೆ ಒಬ್ಬನೇ ಹೊರಟದ್ದು; ಇನ್ನೊಂದು, ೧೯೩೮ರ ಸಪ್ಟೆಂಬರ ತಿಂಗಳಲ್ಲಿ ಸಮುದ್ರಯಾನಕ್ಕೆ ತುಸು

ಭಯವಿದ್ದಿತು, ಇದ್ದಿತು ಎಂದು ಅನಂತನು ಎಲ್ಲಿಯೊ ಓದಿಕೊಂಡಿದ್ದ. ಯುದ್ಧ ಮುಗಿದು ಎರಡು ವರ್ಷಗಳಾಗಿದ್ದರೂ ಯುದ್ಧಕಾಲದಲ್ಲಿ ಸಮುದ್ರ ದಲ್ಲಿ ಬಿತ್ತಿದ ಸ್ಫೋಟಕಗಳ ಅವಶೇಷ ಇನ್ನೂ ಇದ್ದಿತಂತೆ. ಆದರೂ ಸುದೈವ ದಿಂದ, ಸುರಕ್ಷಿತತೆಯಿಂದ ಮುಟ್ಟಿದ. ಹೊಸ ದೇಶ, ಅರಿಯದ ಜನರು, ವಿಚಿತ್ರ ರೀತಿ–ನೀತಿ— ಇವುಗಳಿಗಾಗಿ ದಿಙ್ಮೂಢನಾದ. ಒಂದೆರಡು ವಾರ ಮಾತ್ರ. ಮುಂದೆ ಕ್ರಮೇಣ ಆ ಜನರ ಜೀವನದಲ್ಲಿ ಬೆರೆತುಕೊಂಡ. ಪ್ರಾರಂಭದಲ್ಲಿ ಮನೆಯವರಿಗೆ, ಗೆಳೆಯರಿಗೆ ಕಾಗದಗಳನ್ನು ತಪ್ಪದೆ ಬರೆ ಯುತ್ತಿದ್ದ. ಇಷ್ಟೆ; ಮನೆಗೆ ಬರೆಯುವ ಸುದ್ದಿ ಬೇರೆ, ಗೆಳೆಯರಿಗೆ ಬರೆಯುವ ಸುದ್ದಿ ಬೇರೆ. ಶ್ರೀಧರನು ಒಂದೇ ಒಂದು ಉತ್ತರವನ್ನು ಕಳುಹಿಸಿದ್ದ. ಹಮ್ಮೂನು ಕೊನೆಯವರೆಗೂ ಉತ್ತರವನ್ನೆ ಕಳುಹಲಿಲ್ಲ. ಆದರೆ ಮಾಧವನು ಮಾತ್ರ ಮೊದಲ ಉತ್ತರವನ್ನು ೬-೭ ತಿಂಗಳುಗಳ ತರುವಾಯ ಕಳುಹಿಸಿದರೂ ಮುಂದೆ ತಾನು–ಅನಂತನು–ಕಾಗದ ಬರೆಯದಿದ್ದರೂ ಕೂಡ ಮಾಧವನು ಬರೆಯತೊಡಗಿದ. ಎಂತಹ ಕಾಗದ! ಬರೆಯುವ ಮಾತು ಎಂತಹದು! 'ಅನಂತಾ, ದೇಶಬಾಂಧವರು ಲಕ್ಷಗಟ್ಟಲೆ ಸೆರೆಮನೆಗೆ ಹೋಗುತ್ತಿರುವಾಗ ನೀನು–ನನ್ನ ಗೆಳೆಯ–ಸುಖ ಹಚ್ಚಿಕೊಂಡು ಬ್ರಿಟಿಶರ ದಾಸನಾಗಿ ಆಳಲು ಬರುವುದು ನನಗೆ ನಾಚಿಕೆಯ ವಿಷಯವಾಗಿದೆ.' ಸರಿ, ಎಂದುಕೊಂಡ ಅನಂತ. ತಾನು ಬುದ್ಧಿವಂತ ಎಂಬ ಹೆಮ್ಮೆ ಇವನಿಗೆ; ತನಗೆ ಶಕ್ಯವಿಲ್ಲ ಎಂಬು ದಕ್ಕೆ ಅಸಹನೆ. ಇವರಿಗೆ ಗೊತ್ತಿಲ್ಲ ಬ್ರಿಟಿಶರು ಎಂತಹ ಸಜ್ಜನರು, ಸುಸಂಸ್ಕೃತರು ಎಂಬುದು... ಹಹ! ಜೇಲಿನ ಬದಲು ಇವರನ್ನು ಇಂಗ್ಲಂ ಡಕ್ಕೇ ಕಳುಹಿಸಬೇಕು, ಆಗ ತಿಳಿಯುವುದು ಬ್ರಿಟಿಶರು ಎಂತಹರೆಂಬುದು. ನಾನು I. C. S. ಆಗಿ ಹೋದ ಮೇಲೆ ಇವರನ್ನು ಜೇಲಿಗೆ ಕಳುಹಿಸುವ ಪ್ರಸಂಗ ಬಂದರೆ, ಹಾಗೇ ಮಾಡುವೆ. ಕೊನೆಗೆ ಈ ಮಾಧವನನ್ನಾದರೂ ಕಳುಹಿಸುವೆ. ಆಗಲಾದರೂ ನನ್ನ ಮೇಲಿನ ಇವನ ಹೊಟ್ಟೆಯುರಿ ಕಡಮೆ ಯಾದೀತಲ್ಲ?.... ಜೀವನವೆಂದರೆ ಏನು ಎಂಬುದರ ಕಲ್ಪನೆಯೆ ಇಲ್ಲ ಇವ ರಿಗೆ... ಸುಖವು ಜೀವನದ ಧ್ಯೇಯ ಎಂಬುದಂತೂ ಹೋಯಿತು, ಹೆಚ್ಚು ಕಷ್ಟಪಟ್ಟಂತೆ ಜೀವನ ಹೆಚ್ಚು ಸಾರ್ಥಕ ಎಂಬ ಭಾವನೆ ಏನೊ ಇವರಿಗೆ? ಯಾವನೊ I. C. S. ಇದ್ದವನು ನೋಕರಿ ಬಿಟ್ಟು ಅಸಹಕಾರ ಚಳವಳ

ಸೇರಿದ್ದಾನಂತೆ, ನಾನೂ ಹಾಗೇಕೆ ಮಾಡಬಾರದು—ಎಂತೆ? ಹುಚ್ಚು! ಮೊದಲು ನಾನೂ I. C. S. ಆಗುವವರೆಗೆ ಇವರು ತಡೆಯಬಾರದೇಕೆ? ಹತ್ತಿಪ್ಪತ್ತು ವರ್ಷ ಲಕ್ಷಗಟ್ಟಲೆ ದುಡ್ಡು ಗಳಿಸಿ ಆ ಮೇಲೆ ವಕೀಲಿಯನ್ನು ಬಿಡುವ ಸ್ವಾರ್ಥತ್ಯಾಗ!....ದಿನದಿನಕ್ಕೆ ಅನಂತನಿಗೆ ಈ ಉಪದೇಶ ತಡೆಯ ದಂತಾಯಿತು....ಹಹ! ಈ ಮಾಧವನೂ ಬುದ್ಧಿಯನ್ನು ಕಳೆದುಕೊಂಡ ನೇನೊ? ಅಥವಾ, ಕಾಲೇಜಿನಲ್ಲಿ ಸ್ಕಾಲರ್‌ನಾದರೆ ನಿಜವಾದ ಬುದ್ಧಿವಂತಿಕೆ ಇರುವುದಿಲ್ಲವೇನೊ? ಒಂದು ಮಾತು, ಅದನ್ನು ಸಹಜವಾಗಿ ಬರೆದದ್ದು. ಯುದ್ಧದ ನಿಮಿತ್ತವಾಗಿ ಇಲ್ಲಿ ತರುಣರು ಉಳಿದಿಲ್ಲ, ತರುಣಿಯರು ಮಾತ್ರ ಹೆಜ್ಜೆಗೊಬ್ಬರಂತೆ ಎಂದು ನಾನು ಬರೆದ ಮಾತ್ರಕ್ಕೆ ಇಲ್ಲಿ ಅಂತಃಪುರವನ್ನೆ ಕಟ್ಟಿಸುತ್ತಿರುವೆನೆಂದು ತಿಳಿದನೊ ಏನೊ ಈ ಮೂರ್ಖ? ಸಾಕು, ಇನ್ನು ಇವನ ಕೂಡ ಪತ್ರವ್ಯವಹಾರವೆ ಸಾಕು....ನಿಜವಿದ್ದ ಸಂಗತಿ ಎಂದರೆ, ಈ ವಿಷಯದಲ್ಲಾದರೂ ಮಾಧವನಿಂದ ಉಲ್ಲಾಸದ, ಉತ್ತೇಜನದ ಉತ್ತರ ಬರುವುದೆಂದು ತಾನು ತಿಳಿದದ್ದು. ತನ್ನದಾದರೂ ತಪ್ಪೇನು? ಮಾಧವನೂ ತನ್ನಂತೆ ತರುಣ. ತಾರುಣ್ಯದ ಅನುಭವಕ್ಕಾಗಿ ಅವನಲ್ಲೂ ಕುತೂಹಲವಿರು ವುದು ಸಹಜ. ಕಾಲೇಜಿನಲ್ಲಿದ್ದಾಗ ಎಷ್ಟು ಸಲ ಇಂತಹ ವಿಷಯದ ಮೇಲೆ ಯಥೇಚ್ಛವಾಗಿ ಹರಟೆ ಕೊಚ್ಚಿಲ್ಲ? ಅದಕಾಗಿ ತಾನು—ಸಂದಿಗ್ಧವಾಗಿ ಬರೆ ದುದು ಜಾಣತನವೆ ಆಯಿತು!—ಈ ಬಗ್ಗೆ ಬರೆದರೆ ಇವನ ಬ್ರಹ್ಮಚರ್ಯದ ಉಪದೇಶ! ಹುಂ....ಒಟ್ಟು, ನಮ್ಮಲ್ಲಿ ಆಧುನಿಕ ಸಂಸ್ಕೃತಿಯೆ ಇಲ್ಲ... ಸಾಕು, ಇವನೊಡನೆ ಪತ್ರವ್ಯವಹಾರವೆ ಸಾಕು.

. . . . .

೧೯

ಅಂದಿನಿಂದ ಮಾಧವನು ತನಗೆ ಸೇರದಿದ್ದುದನ್ನು ಅನಂತನು ಈಗಲೂ ನೆನೆದುಕೊಂಡನು. ಆದರೂ—ಪಾಪ! ಇತ್ತಿತ್ತಲಾಗಿ ಅವನನ್ನು ನೋಡಿ ಕನಿಕರ ಬರುವಂತಿದೆ. That's it! ಅದಕಾಗಿಯೆ ಈ ದಿನ ತಾನು ಅವನನ್ನು ಕಾಣಲು ಒಪ್ಪಿದ್ದು. ಅನಂತ ಮತ್ತೊಂದು ಸಿಗರೇಟನ್ನು ಎತ್ತಿದ. ಅದನ್ನು ಹೊತ್ತಿಸಿ ಒಂದೆರಡು ಸಲ ಸುತ್ತುಸುತ್ತು ಹೊಗೆಯನ್ನು ಫೂತ್ಕರಿಸಿ ನಾಲ್ಕು

ಹೆಜ್ಜೆ ನಡೆದು ತನ್ನ ವೇಷಗನ್ನಡಿಯ ಇದಿರಿನಲ್ಲಿದ್ದ ಕುರ್ಚಿಯಲ್ಲಿ ಕುಳಿತು ಕೊಂಡ. ಕನ್ನಡಿಯಲ್ಲಿ ಮುಖವನ್ನೂ ನೋಡಿಕೊಂಡ. "ಆಶ್ಚರ್ಯ" ಎಂದ ಗಟ್ಟಿಯಾಗಿ. ನಿಜವಾಗಿಯೆ ಆಶ್ಚರ್ಯ, ಎಂದುಕೊಂಡ. ತನ್ನ ಮತ್ತು ಮಾಧವನ ಸ್ಥಿತಿಗತಿಯಲ್ಲಿ ಇಷ್ಟು ವ್ಯತ್ಯಾಸವಾದೀತೆಂದು ಯಾರು ತಿಳಿ ದಿದ್ದರು? ಇಂದು ತನಗೆ, I. C. S. ಅನಂತನಿಗೆ—ಸ್ವತಂತ್ರ ಹಿಂದುಸ್ತಾನದ ಸರಕಾರವು ಕೈಮುಗಿದು ಬೇಡಿಕೊಳ್ಳುತ್ತಿದೆ, ಸಹಾಯ ಮಾಡು, ಎಂದು. ಆದರೆ 'ಸ್ವಾತಂತ್ರ್ಯಯುದ್ಧ' ಎಂದು ೩-೪ ಸಲ ಜೇಲಿಗೆ ಹೋಗಿ ಬಂದ ಈ ಹುಚ್ಚು ಮಾಧವನಿಗೆ ಹೊಟ್ಟೆಗೆ ಗತಿ ಇಲ್ಲ! ನಾನು ಈ ಸೆಕ್ರೆಟೇರಿ ಯಟ್‌ಗೆ ವರ್ಗಾಯಿಸಿ ಬಂದ ಮೇಲೆ ಹಮ್ಮೂನೆ ಹೇಳಿಕೊಂಡ ಎಂಬುದ ಕ್ಕಾಗಿ ಮಾಧವನಿಗೆ ಹುಡುಗನಿಗೆ ಕೆಲಸವನ್ನು ಕೊಟ್ಟೆ; ತಂದೆ-ಮಕ್ಕಳ ಹೊಟ್ಟೆಗೆ ಆಧಾರ ಮಾಡಿಕೊಟ್ಟೆ....ಅನಂತನು ಮತ್ತೆ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡ....ಅನಂತನು ಹೆಮ್ಮೆಯಿಂದ ಮುಗುಳ್ನಗೆ ಸೂಸಿದನು....ಈಗ ದೇಶಕ್ಕೆ ತನ್ನಂತಹರೆ ಬೇಕು, ಮಾಧವನಂತಹರು ಬೇಡ ....ಅದಕಾಗಿಯೆ ಅಲ್ಲವೆ ಮಂತ್ರಿಗಳೂ ಬರುತ್ತಾರೆ. ಮುಂದಾಳುಗಳೂ ಬರು ತ್ತಾರೆ ತನ್ನ ಕಡೆ....ಮನೆಗೆ ಕರೆಯಿಸುತ್ತಾರೆ, ಪ್ರತಿಯೊಂದು ಮಾತಿಗೂ ತನ್ನ ಸಲಹೆಯನ್ನು ಕೇಳುತ್ತಾರೆ....ಹಹ! .... ಆ ಹಮ್ಮೂ? ಅವನಂತೂ ದಿನಾಲು ಎಡತಾಕುತ್ತಾನೆ....ಇನ್ನು ಕರ್ನಾಟಕ ಪ್ರಾಂತವಾಗುವದಂತೆ.... ಮುಗಿದೇ ಹೋಯಿತು. ಆಗ ನಾನೇ ರಾಜ, ನಾನೇ ಮಂತ್ರಿ! ಮಾಧವನ ಮನೆಗೆ ತಾನು ಹೋಗುವುದು ಯೋಗ್ಯವಾದೀತೆ?.... ಆ ಮನೆಯಾದರೂ ಎಂತಹದೊ? ಆ ಅವಸ್ಥೆ ಎಂದೊ ಗೊತ್ತಿದೆ.

. . . . .

೧೯೩೪ರಲ್ಲಿ ಮಾಧವನ ಅವಸ್ಥೆ ಮೊದಲು ಗೊತ್ತಾಗಿತ್ತು ಅನಂತನಿಗೆ. ತಾನು ಯಾವುದೊ ಒಂದು ಕಾರಣಕ್ಕಾಗಿ ಮುಂಬಯಿಗೆ ಬಂದಿದ್ದ. ಗುಜ ರಾತದಲ್ಲಿ ತಾನು ಜಿಲ್ಲಾಧಿಕಾರಿಯಾಗಿದ್ದಾಗಿನ ಮಾತು. ಒಂದು ದಿನ ಹೊಟೆಲಿನಲ್ಲಿ ಕುಳಿತಾಗ ಯಾರೊ ತನ್ನ ಕಡೆ ಬಂದಿದ್ದಾರೆಂದು ವರದಿ ಬಂದಿತು. ಅನಂತನಿಗೆ ಆಶ್ಚರ್ಯ....ತನ್ನ ಕಡೆ ಯಾರು ಬಂದಿರಬಹುದು?

ತಾನು ಮುಂಬಯಿಗೆ ಬಂದದ್ದು ಅಕಸ್ಮಾತ್ತಾಗಿ, ಯಾರಿಗೂ ತಿಳಿಯು ವಂತಿಲ್ಲ; ಯಾಕೆಂದರೆ, ಒಂದು ಮಹತ್ತ್ವದ ಮಾತಿನ ಚರ್ಚೆಗಾಗಿ ಗವರ್ನರ ಅವರಿಂದ ಕರೆ ಬಂದಿತ್ತು; ಅದೂ ಅತ್ಯಂತ ಗೋಪ್ಯವಾದ ವಿಷಯ. ಏನೇ ಇರಲಿ, ಬರಬಹುದು ಎಂದ. ಅತ್ಯಂತ ಒರಣದ, ಶುಭ್ರ ಖಾದಿಯ, ಅರ್ಧ ನಗೆಮೊಗದ ತರುಣನೊಬ್ಬನು ಬಂದನು. ಅನಂತ ಒಂದುನಿಮಿಷ ಅವಾಕ್ಕಾದ, ಆ ವೇಷವನ್ನು ನೋಡಿ. ಮರುಗಳಿಗೆಯಲ್ಲಿ ಅವನಿಗೆ ಗುರುತು ಹತ್ತಿತು.

"ಹೆಲೊ, ಮಿಸ್ಟರ ಶ್ರೀಧರ!" ಎಂದ. ಕುರ್ಚಿಯಿಂದ ಏಳಲಿಲ್ಲ.

"ಗುರುತು ಹತ್ತಿತೆ, ಮಿಸ್ಟರ ಅನಂತ?" ಎಂದು ನಗೆಯಿಂದ ಶ್ರೀಧರ ಕೇಳಿದ.

"ಹತ್ತದೆ ಏನು? ಮತ್ತೇನು? What can I do for you? ಆ–ನಿಮ್ಮ ಮಾಧವ ಎಲ್ಲಿದ್ದಾರೆ? ಕಾಲೇಜಿನಲ್ಲಿ ನಿಮ್ಮದೂ ಅವರದೂ ಬಹಳ Thick ಅಲ್ಲವೆ? ಅಂ?" ಎಂದು ಅನಂತ ನಕ್ಕ.

"ಮಾಧವನ ಬಗ್ಗೆಯೆ ನಿಮ್ಮ ಕಡೆ ಬಂದಿರುವೆ"

"ಏನು? ನನ್ನಿಂದ ಯಾವ ಕೆಲಸ ಆಗ್ಬೇಕು? ನೋಡೋಣ, ಯಾಕೆಂದರೆ I am a very busy man."

"ನನಗ ಗೊತ್ತು. ನಾನು ತಮ್ಮೂರಿಗೇ ಹೋಗಿದ್ದೆ. ಜರೂರದ ಕೆಲಸಕ್ಕ ಮುಂಬಯಿಗೆ ಬಂದಿರುವಿರಿ ಅಂತ ಹೇಳಿದರು. ಇಲ್ಲಿ ಬಂದೆ—"

"ನಮ್ಮೂರ ಅಂದ್ರೆ—"

"ಅಹುದು. ಗುಜರಾತದಲ್ಲಿ" ಎಂದು ತಲೆತೂಗುತ್ತ ಶ್ರೀಧರ ಹೇಳಿದ.

"I say! ಛನ್ನ ಬೇಟೆಯಾಡಿದಿರಿ, ಅಂ? You have hunted me almost. ಏನು ಅಂತಹ ಕೆಲಸ?"

"ತಮಗೆ ತೊಂದರೆ ಅಲ್ಲದಿದ್ದರೆ ಹೇಳ್ತೀನಿ. ಯಾಕೆಂದರೆ, ತಾವು ಅಧಿಕಾರಿಗಳು. ಮಾಧವ ಚಳವಳದೊಳಗ ಪೂರ್ತಿ ಸೇರಿದವ—"

"What ಚಳವಳಿ!" ಅನಂತನು ತಿರಸ್ಕಾರದಿಂದಲೆ ಉಸುರಿದ. "ಏನೊ ಒಂದು ಭ್ರಮು, ದುರ್ಬುದ್ಧಿ."

"ನಾನು ಅದರಲ್ಲಿ ಸೇರಿಲ್ಲ, ಆ ಬಗ್ಗೆ ವಿಚಾರಾನೂ ಮಾಡಿಲ್ಲ. ನಾನು ಬಂದದ್ದು ಒಂದು ಕಾಲದ ಗೆಳೆತನಕ್ಕಾಗಿ; ನಾವೆಲ್ಲರೂ ಮಾಧವನ ಗೆಳೆಯರು; ಅದಕ್ಕೆ ಅವನಿಗೆ ಸಹಾಯ ಮಾಡೋದು–"

ಅನಂತನು ಕಿಸೆಗೆ ಕೈಹಾಕಿದ. “ಓ, ಇಷ್ಟೇನೆ? Selfದ ಮ್ಯಾಲೆ Cheque ಕೊಡ್ತೀನಿ. ಎಷ್ಟು–”

ಶ್ರೀಧರನ ಮುಖ ತುಸು ಕೆಂಪಾದುದು ಅನಂತನ ಲಕ್ಷ್ಯಕ್ಕೆ ಬಂದು ಅವನು ತಡೆದಿದ್ದನು. ಆದರೆ ಶ್ರೀಧರನು ಮಾತನ್ನು ಮಾತ್ರ ಸೌಮ್ಯ ವಾಗಿಯೆ ಆಡಿದನು.

“ಅವನಿಗೆ ಸಹಾಯ ಬೇಕಾದದ್ದು ಹಣದ್ದಲ್ಲ. ಇಷ್ಟೇಕೆ? ಅವನಿಗೆ ಈ ಸಹಾಯ ಬೇಕೆ ಆಗಿರಲಿಕ್ಕಿಲ್ಲ. ನಾನು ನಾನಾಗಿಯೆ ಬಂದಿರುವೆ.”

“Strange mystery! ನನಗೆ ತಿಳಿಯಲಿಲ್ಲ” ಎಂದನು ಅನಂತ.

ಆಗ ಶ್ರೀಧರನು ದೊಡ್ಡ ಕತೆಯನ್ನೆ ಹೇಳಿದನು. ಮಾಧವನ ಅನವಸ್ಥೆ, ಅವನ ಜೀವನದ ಅನಿಶ್ಚಿತತೆ, ಅವನ ಹೆಂಡತಿಗಾದ ಅಸಾರೋಗ್ಯ, ಈಗ ಆಕೆಯ ಪರಿಸ್ಥಿತಿ ಚಿಂತಾಜನಕವಾದುದು, ಶ್ರೀಧರನು ತಾನಾಗಿಯೆ ಆಕೆ ಯನ್ನು ಯೋಗ್ಯ ಚಿಕಿತ್ಸಕನಿಗೆ ತೋರಿಸಲು ಮುಂಬಯಿಗೆ ಕರೆದುಕೊಂಡು ಬಂದದ್ದು—

“Excuse me” ಎಂದು ನಡುವೆಯೆ ಅನಂತನು ಮಾತನಾಡಿದನು. “ಕ್ಷಮಿಸಬೇಕು ನನ್ನ. ಆದರೆ ನೀವು ಹೇಳೋದು ನಿಜ ಇದ್ದರೆ ಇದೇನೊ ಜವಾಬ್ದಾರಿ ಇಲ್ಲದ ಉಡಾಳನ ಕತೆ ಕಾಣ್ತದ. Do you think he deserves any help? ಅಲ್ಲ, ಮಾಡಿದ ಸಹಾಯದ ಉಪಯೋಗ ಆದ್ರೂ ಆದೀತೇನು ಅಂತ.”

ಶ್ರೀಧರನ ಮುಖವನ್ನು ನೋಡಿದಾಗ ಇನ್ನೂ ಇವನಿಗೆ ಮಾಧವನ ಬಗ್ಗೆ ಎಂದಿನಂತೆಯೆ ಆದರಬುದ್ಧಿ ಇದೆ ಎಂಬುದನ್ನರಿತ ಅನಂತ. ಯಾಕೆಂದರೆ, ಶ್ರೀಧರನು ಕುರ್ಚಿಯಿಂದ ಏಳಬೇಕೆಂದು ಹವಣಿಸಿದ್ದೂ ಮತ್ತೆ ಕುಳಿತು ಕೊಂಡುದೂ ಅನಂತನ ಲಕ್ಷ್ಯಕ್ಕೆ ಬಂದಿತ್ತು.

“ಅವರ ಅಭಿಪ್ರಾಯ ನಮಗೆ ಒಪ್ಪಿಗೆಯಾಗದಿದ್ದ ಮಾತ್ರಕ್ಕೆ ದೇಶದ ಲಕ್ಷಾವಧಿ ಜನರು ‘ಉಡಾಳ’ ಎಂದು ನಾನು ಹೇಗೆ ಹೇಳಲಿ? ಅಂತಹರಲ್ಲಿ ಮಾಧವನೂ ಒಬ್ಬ. ಅನೇಕ ಕಷ್ಟ–ನಷ್ಟಗಳನ್ನು ಸಹಿಸಿದ್ದಾನೆ, ಸಹಿಸಲು ಸಿದ್ಧನಿದ್ದಾನೆ. ಈಗ ಅವನು ಹೆಂಡತಿಯನ್ನು ಅಲಕ್ಷ ಮಾಡಿದ್ದು ಉಡಾಳ ತನದಿಂದಲ್ಲ, ತನ್ನ ಪ್ರಾಮಾಣಿಕ ಬುದ್ಧಿಯ ದೇಶಸೇವೆಗಾಗಿ.” ಶ್ರೀಧರನು ತಡೆದನು.

" Don't mind me. ನಾನು ಅಂದದ್ದನ್ನು ಲಕ್ಷ್ಯಕ್ಕೆ ತಂದುಕೋ ಬೇಡಿರಿ. ಮುಂದೆ ? "

ತನ್ನ ಈ ಮಾತನ್ನು ಕೇಳಿ ಶ್ರೀಧರನು ಸುಮ್ಮನಾಗಿದ್ದನು, ಅನುಮಾನಿಸುವವನಂತೆ ಕಂಡನು. ಇದೇನು ಇಲ್ಲದ ರಗಳೆಯಲ್ಲಿ ಸಿಕ್ಕಿಕೊಂಡೆ-ಎಂದು ತನ್ನ ವಿಚಾರ. ಏನೆ ಆಗಲಿ, ಈ ಸಂದರ್ಶನ ಬೇಗ ಮುಗಿದಷ್ಟು ಉತ್ತಮ ಎಂದೆಣಿಸಿ ಅನಂತನು ತಾನಾಗಿಯೆ ಮಾತನ್ನು ಮುಂದರಿಸಿದನು.

" ಈಗ ಮಾಧವ ಎಲ್ಲಿದ್ದಾರೆ ? "

ಶ್ರೀಧರನು ತನ್ನನ್ನು ಒಂದೇ ಸವನೆ ದಿಟ್ಟಿಸಿದ್ದನು. ಅನಂತನಿಗೆ ಆ ಪ್ರಸಂಗ ಎಂದಿಗೂ ಮರೆಯುವಂತಿರಲಿಲ್ಲ. ಕೊನೆಗೆ ಶ್ರೀಧರನು ತನ್ನನ್ನು ದಿಟ್ಟಿಸುತ್ತಲೆ ಹೇಳಿದನು, " ಮಾಧವನು ಬಾರ್ಡೋಲಿಗೆ ಹೋಗಿದ್ದಾನೆ. "

" ಏನು ? "

ಅನಂತನು ಆ ಶಬ್ದವನ್ನು ನುಡಿಯುತ್ತಲೆ ಕುರ್ಚಿಯಿಂದ ಪುಟಿದೆದ್ದನು. ಅಷ್ಟರಲ್ಲಿಯೆ ಬೇರೊಂದು ವಿಚಾರದಿಂದ ಶಾಂತನಾದನು, " ಏನು? ನನ್ನನ್ನು ಕಾಣಲಿಕ್ಕೆ ಅಲ್ಲಿಯ ವರೆಗೆ ಹೋಗಿದ್ದಾರೆಯೆ ? " ಎಂದು ಕೇಳಿದನು.

" ಇಲ್ಲ. ಸತ್ಯಾಗ್ರಹದಲ್ಲಿ ಸ್ವಯಂಸೈನಿಕನಾಗಲು. "

ಶ್ರೀಧರನ ವಾಕ್ಯ ತನ್ನನ್ನು ಕ್ಷಣಮಾತ್ರ ದಿಗಿಲುಗೊಳಿಸಿತು. ಹೀಗಿದ್ದರೆ ನನ್ನದೇನು ಸಂಬಂಧ—ಎಂದು ಹೇಳಿಬಿಡಬೇಕೆಂದೆನ್ನಿಸಿತು. ಸತ್ಯಾಗ್ರಹ! ಇದನ್ನು ಒಂದೆರೆಗಳಿಗೆಯಲ್ಲಿ ಧ್ವಂಸ ಮಾಡುವ ಸಿದ್ಧತೆ ಇದೆ ಸರಕಾರದ್ದು, ತಾನು ಬಂದದ್ದು ಆ ಚರ್ಚೆಗಾಗಿಯೆ, ಎಂದು ಹೇಳಿಬಿಡೋಣವೆ ಎನ್ನಿಸಿತು. ಕೊನೆಗೆ ತಾನು ಜಿಲ್ಲಾಧಿಕಾರಿ ಎಂದು ತೋರಿಸುವವನಂತೆ "ಹಾಗಿದ್ದರೆ ನಾನು ಏನೂ ಮಾಡಲಾರೆ " ಎಂದ.

ಶ್ರೀಧರನ ಮುಖದಲ್ಲಿಯ ಕಳೆ ಒಮ್ಮೆಲೆ ಬದಲಾಯಿತು. ಅನಂತನಿಗೆ ದಿಗಿಲು. ಇದೇನು ? ಈ ಪ್ರಾಣಿ ಅತ್ತುಬಿಡುವನೊ ಏನು ? ಈ ಹೊಟೆಲ್‌ದಲ್ಲಿ ಇಂತಹ ಗೆಳೆಯ ತನ್ನವ ಎಂದುಕೊಂಡರೆ ತನ್ನ ಸ್ಥಾನದ, ಮಾನದ

ಗತಿ ಏನು ? ಇಲ್ಲ. ಇ–ಲ್–ಲ ! ಶ್ರೀಧರನು ತಡೆದುಕೊಂಡಿದ್ದಾನೆ. ಕುರ್ಚಿಯಿಂದ ಎದ್ದ. ಹೋಗುವನೇನು ? ಹೋದರೆ ಪೀಡೆ ತಪ್ಪಿತು. ತಾನೂ ಎಲ್ಲಾದರೂ ಸಿನೆಮಾಕ್ಕೆ ಹೋಗಿ ಹೊತ್ತು ಕಳೆದರಾಯಿತು. ಇಲ್ಲವಾದರೆ ಅವನು ಮತ್ತೆ ಬರಬಹುದು.

" ಈಗ ನಾನು ಬಂದದ್ದು ಮಾಧವನಿಗಾಗಿ ಅಲ್ಲ, ಅವನ ಹೆಂಡತಿಯ ವತಿಯಿಂದ."

ಶ್ರೀಧರನ ಮಾತನ್ನು ಕೇಳಿ ಅನಂತನಿಗೆ ಆಶ್ಚರ್ಯವಾಯಿತು. ಮಾಧವನ ಪೀಡೆ ತಪ್ಪಿಸಿಕೊಳ್ಳಬೇಕೆಂದರೆ ಅವನ ಸಂಸಾರದ ಪೀಡೆ ತಗಲುವಂತೆ ಕಾಣುವುದಲ್ಲ. ಏನೇ ಆಗಲಿ, ಎನ್ನುತ್ತ ತನ್ನ ಕೈಗಡಿಯಾರವನ್ನು ನೋಡಿಕೊಂಡನು. " ಆಗಲಿ, ನನ್ನಿಂದ ಏನು ಆಗಬೇಕಾಗಿದೆ ಎಂಬುದನ್ನು ತಿಳಿಸಿದರೆ ಶಕ್ಯವಾದಲ್ಲಿ ಮಾಡುವೆ" ಎಂದು ಹೊರಹೊರಡುವ ಸಿದ್ಧತೆಯಿಂದ ಅತ್ತಿತ್ತ ನೋಡಿದನು. ಶ್ರೀಧರನು ನಿಂತಲ್ಲಿಯೆ ನಿಂತಿದ್ದಾನೆ.... ಈ ಪುಣ್ಯಾತ್ಮನಿಗೆ ಬೇಕಾದದ್ದಾದರೂ ಏನು ? " ಡಾಕ್ಟರರಿಗೆ ಪರಿಚಯ ಪತ್ರ ಬೇಕೆ ?—"

" ಈಗ ಡಾಕ್ಟರರ ಅವಶ್ಯಕತೆ ಉಳಿದಿಲ್ಲ. "

" ಅಂದರೆ ? ಆಕೆಯ ಮೈಯಲ್ಲಿ ಗುಣವಿಲ್ಲ ಎಂದು—? "

" ಅದು ಹಿಂದಿನ ಕತೆ. " ಶ್ರೀಧರನ ದನಿ ಬಿರುಸಾಯಿತು. " ಆದರೆ ಈಗ ಆಕೆ ಸಾಯುವುದು ಖಂಡಿತ ಎಂದು ಡಾಕ್ಟರರು ಅಭಿಪ್ರಾಯಪಟ್ಟಿದ್ದಾರೆ, ಆಕೆಗೂ ಗೊತ್ತಿದೆ. ಆದರೆ—"

" ಏನಾದರೂ ವ್ಯವಸ್ಥೆ ಮಾಡಿಸಬೇಕಾಗಿದೆಯೆ ? "

" ಸಾಯುವ ಮುಂಚೆ ಗಂಡನನ್ನು ನೋಡಬೇಕೆಂಬ ಆಸೆ—"

ಅನಂತನು ನಕ್ಕನು. " ಇದರಲ್ಲಿ ನನ್ನ ಸಹಾಯದ ಸಂಬಂಧವೆಲ್ಲಿ ? "

ಶ್ರೀಧರನು ತನ್ನನ್ನು ದಿಟ್ಟಿಸಿ ನೋಡಿದನು, ನೋಡುತ್ತಲೆ ಹೇಳಿದನು "ಆದರೆ, ಅವನು ನೀವು ಕೊಟ್ಟ ಶಿಕ್ಷೆಯನ್ನು ಭೋಗಿಸುತ್ತಲಿದ್ದಾನೆ ನಿಮ್ಮ ಜಿಲ್ಲೆಯಲ್ಲಿ."

ಅನಂತನು ಸಿಳ್ಳುಹಾಕಿದನು. ಇದೊಳ್ಳೆ ಪೇಚು ಬಂದಿತಲ್ಲ ? ಸದ್ಯ, ಇವನನ್ನು ಇಲ್ಲಿಂದ ಕಾಲು ಕಿತ್ತಿಸಬೇಕು. " ಓಹೊ ! ಇಷ್ಟೆ ಅಹುದಲ್ಲೊ ? ನಡೆಯಿರಿ, ವಿಚಾರ ಮಾಡೋಣ. ಬಹಳ ದಿವಸಗಳ ಮೇಲೆ ಭೆಟ್ಟಿಯಾಗಿದೆ. ಎಲ್ಲಿಯಾದರೂ ಚಹವನ್ನು ಕುಡಿಯೋಣ, ಅಲ್ಲಿಯೆ ಮಾತನಾಡೋಣ."

ಅಂತೂ ಆ ದಿವಸ ಹೇಗಾದರೂ ಮಾಡಿ ಶ್ರೀಧರನನ್ನು ಜಾರಿಸಿಕೊಳ್ಳ ಬೇಕಾದರೆ ಸಾಕುಸಾಕಾಗಿ ಹೋಯಿತು. ಊರಿಗೆ ಹೋಗಿ ಬಿಡುಗಡೆಯ 'ಆರ್ಡರ್' ಕೊಡುವೆ ಎಂದಿದ್ದ. ಅಲ್ಲಿ ಹೋದ ಮೇಲೆ ಬೇರೆ ಕೆಲಸದಲ್ಲಿ ಮರೆತುಬಿಟ್ಟಿದ್ದ. ಆದರೆ, ಪ್ರಶ್ನೆ—ಸುದೈವದಿಂದ–ತಾನಾಗಿಯೆ ಬಿಟ್ಟಿತ್ತು. ೩–೪ ದಿನಗಳಲ್ಲಿ ಶ್ರೀಧರನ ಕಾಗದ ಬಂದಿತು. "ಮಾಧವನ ಹೆಂಡತಿ ತೀರಿ ಕೊಂಡಳು. ನಿಮ್ಮ ಸಹಾನುಭೂತಿಗಾಗಿ ಋಣಿಯಾಗಿದ್ದೇನೆ. ಮಗು ಚನ್ನಾ ಗಿದೆ ನನ್ನ ಕಡೆ ಎಂದು ಮಾಧವನಿಗೆ ತಿಳುಹಿಸಿದರೆ ಉಪಕಾರವಾಗುವುದು." ಆ ಕಾಗದವನ್ನು ಓದಿ ಅನಂತ ನಕ್ಕಿದ್ದ, ತಿರಸ್ಕಾರದಿಂದ. ತನಗೆ ಗತಿ ಇಲ್ಲ ದಾಗ ದೇಶಸೇವೆಯನ್ನಾಗಲಿ ಮದುವೆಯನ್ನಾಗಲಿ ಮಾಡಿದರೆ ಈ ಹಾಳು ಅವಸ್ಥೆ ತಪ್ಪೀತೆ!

. . . . .

ಕನ್ನಡಿಯಲ್ಲಿ ಮತ್ತೆ ಮುಖವನ್ನು ನೋಡಿಕೊಂಡ. ತಾನೆಂತಹ ಸುದೈವಿ! ಆಳುವ ಭಾಗ್ಯ ತನಗೆ ಬಂದಿದೆ. ಮಾಧವನಂತಹರಿಗೆ ಅಳುವ ಭಾಗ್ಯ....ಹಹ!....ಇಂದಿಗೂ ಅದೇ ಅವಸ್ಥೆ ಮಾಧವನದು....ಹ!....ಅಳುವ ಭಾಗ್ಯ ಮಾಧವನಿಗೆ ಬಂದಿದೆ. ಮಾಧವನ ಹೆಂಡತಿ ಸತ್ತಳೆಂದಾಗ ತನಗೆ ಎಳ್ಳಷ್ಟೂ ಕೆಡಕೆನಿಸಿರಲಿಲ್ಲ. ಹುಚ್ಚು! ಹದಿನಾರು ವರ್ಷಕ್ಕೆ ಮದುವೆ ಮಾಡಿ ಕೊಳ್ಳುವುದೊಂದು ಕೆಟ್ಟ ರೂಢಿ ನಮ್ಮಲ್ಲಿ....ತನಗೀಗ—೧೯೪೭ರಲ್ಲಿ– ವಯಸ್ಸು ನಲವತ್ತೆರಡು–ಏನು ನಲವತ್ನಾಲ್ಕೋ? ಆಯ್. ಸಿ. ಎಸ್. ಕಾಗಿ ತನ್ನ ತಂದೆ ವಯಸ್ಸಿನಲ್ಲಿ–ತನ್ನ ವಯಸ್ಸಿನಲ್ಲಿ–ಏನೋ ಬದಲು ಮಾಡಿಸಿದ್ದ ರಂತೆ....ಅಂತೂ ನಲವತ್ತು ಇದ್ದೇ ಮುಗಿದಿದೆ. ತಾನಿನ್ನೂ ಮದುವೆಯನ್ನು ಮಾಡಿಕೊಂಡಿಲ್ಲ—ಮಾಡಿಕೊಂಡಿಲ್ಲ ಎನ್ನಲೂ ಅಡ್ಡಿ ಇಲ್ಲ. ಇಂಗ್ಲಂಡದಿಂದ ಮರಳಿ ಬಂದ ಮೇಲೆ ಶಾಸ್ತ್ರದ ಮದುವೆಯಾಯಿತು, ತಂದೆಯ ಕಾಟವೂ ತಪ್ಪಿತು; ಯಾಕೆಂದರೆ ಮಾವನು ಇಂಗ್ಲಂಡ ಶಿಕ್ಷಣದ ಎಲ್ಲ ವೆಚ್ಚವನ್ನು ಹೊತ್ತಿದ್ದನು. ಆದರೆ ಸುದೈವದಿಂದ ತನಗೆ ಬೇಡಾದ ಹೆಂಡತಿ ಯಮರಾಯ ನಿಗೆ ಬೇಕಾದಳು, ತೊಡಕು ತಪ್ಪಿತು....ಅನಂತನು ಕುರ್ಚಿಯಿಂದೆದ್ದನು.... ಯಾಕೆ ಈ ಹಾಳು ವಿಚಾರ? ಇಂದು ತನಗೆ ಸುಖವಿದೆ, ಸಂಸಾರವಿದೆ; ಸಾಕಲ್ಲ? ಆದರೆ ಈ ಹಾಳು ಸ್ವಾತಂತ್ರ್ಯ ಒಂದು ಬಂದು ಹಾಲಿನಲ್ಲಿ

ಉಪ್ಪಿನ ಹರಳಿನಂತಾಗಿದೆ ಸಂಬಳವನ್ನು ಕಡಮೆ ಮಾಡುವರಲ್ಲ?.... ನಮ್ಮ ಸಂಬಳದ ಮೇಲೆ ಯಾಕೊ ಇವರ ಕಣ್ಣು? ಅನಂತನು ಮೊನ್ನೆ ಮೊನ್ನೆಯೆ ಒಂದು ಯುಕ್ತಿಯನ್ನು ಶೋಧಿಸಿದ್ದನು. ಸ್ವತಂತ್ರ ಸರಕಾರವೆಂದರೆ ಹಿಂದೀ ಅಧಿಕಾರಿಗಳಿಗೆ ಹೆಚ್ಚು ಮಾನವನ್ನು ಕೊಡಬೇಕು. ಅದರಂತೆಯೆ, ಹಿಂದೀ ಆಯ್. ಸಿ. ಎಸ್. ಅಧಿಕಾರಿಗಳಿಗೆ ಹೆಚ್ಚು ಸಂಬಳವನ್ನು ಕೊಡಬೇಕು. ಹಿಂದೀಯರು ಬಡವರೆಂದು ಇದೇ ದೇಶಭಕ್ತರು ಗೋಳಿಡುವುದಿಲ್ಲವೆ? ಭಕ್ತವರು ಇಂಗ್ಲಂಡದ ವರೆಗೆ ಹೋಗಿ ಬಂದು ಆಯ್. ಸಿ. ಎಸ್. ಆಗುವುದೆಂದರೆ ಎಂತಹ ವೆಚ್ಚ! ಸಾಲ! ಆದ್ದರಿಂದ ಅವರಿಗೆ—ಹಂ. ಈ ದಿನ ಹಮ್ಮೂನಿಗೇ ಹೇಳಿಬಿಡಬೇಕು. ಅಸೆಂಬ್ಲಿಯಲ್ಲಿ ಪ್ರಶ್ನೆಯನ್ನೆ ಹಾಕಿಸಬೇಕು. ಅಹುದು, ಈ ದಿನವೆ ಮರೆಯದೆ ಹಮ್ಮೂನಿಗೆ ಹೇಳುವೆ, ಅವನೂ ಅಲ್ಲಿಯೆ ಬರುವವನಿದ್ದಾನೆ ಹಂ–ಎಂದು ತಿರಸ್ಕಾರದಿಂದ ತುಟಿ ಬಿರಿದ ಅನಂತ. ಸ್ವಾತಂತ್ರ್ಯದ ದಿನ, ಅದಕ್ಕೆ ನಾಲ್ವರೂ ಗೆಳೆಯರೂ ಈ ದಿನ ಕೂಡ ಬೇಕಂತೆ! ಆದರೆ, ಹಾಳು ಆ ಮಾಧವನ ಕೋಣೆಯಲ್ಲಿ ಯಾಕೆ? ತಾಜ ಮಹಲ ಹೊಟೆಲಿನಲ್ಲಿ ಸೇರಿದ್ದರೆ ನಡೆಯುತ್ತಿದ್ದಿಲ್ಲವೆ? ಥೂ! ಈಗ ನೆನಪಿಗೆ ಬಂದಿತು. ಆ ಮಾಧವನು ಅಜಾರಿಯಂತೆ! ಅವನ ಅವಸ್ಥೆಯೆ ಹಾಗೆ.... ಯಾವುದು ಅದು—? ಆ ದಿನ—? ಅನಂತನು ಖೊಳ್ಳನೆ ನಕ್ಕನು.

. . . .

೨೦

ಅನಂತನು ಆ ದಿನ ಮುಂಬಯಿಗೆ ಬಂದಿದ್ದನು. ಹಮ್ಮೂನೂ ಇತ್ತಿತ್ತಲಾಗಿ ಅನಂತನಿಗೆ ಮೇಲಿಂದ ಮೇಲೆ ಭೆಟ್ಟಿಯಾಗುತ್ತಿದ್ದನು. ಅದಕ್ಕೊಂದು ಸಂದರ್ಭವೂ ಒದಗಿತ್ತು. ಅನಂತನಿಗೆ ಕುದುರೆಯ ಜೂಜಾಟ ಎಂದರೆ ಪ್ರಾಣ. ಮೇಲಿಂದ ಮೇಲೆ ಪುಣೆಗಾಗಲಿ, ಮುಂಬಯಿಗಾಗಲಿ ಬಂದೇ ಬರುತ್ತಿದ್ದನು. ಅಂತಹ ಒಂದು ಸಂದರ್ಭದಲ್ಲಿ ಹಮ್ಮೂನ ಭೆಟ್ಟಿಯಾಗಿತ್ತು.

"ಹೆಲೊ! ಹಮ್ಮೂ! So we meet here. ಅಂ?" ಎಂದು ನಗೆಯಿಂದ ಮಾತನಾಡಿಸಿದ್ದನು.

"ಯಾರು? ಮಿಸ್ಟರ್ ಅನಂತ! ಸಂತೋಸ...ಮಹಾಲಕ್ಷ್ಮಿಯ ಪ್ರಸಾದದಿಂದ ಭೆಟ್ಟಿಯಾಯಿತಲ್ಲ?" ಎಂದ ಹಮ್ಮೂ.

"ಮಹಾಲಕ್ಷ್ಮಿಯ ಪ್ರಸಾದ! ಹಹಹ!....ಹಹ! ಹಮ್ಮೂ, You are the same comic fellow" ಎನ್ನುತ್ತ ಅನಂತನು ಹಮ್ಮೂನ ಹೆಗಲಮೇಲೆ ಕೈಹಾಕಿದನು. ಅಂತೂ, ಸುಮುಹೂರ್ತದಲ್ಲಿ ಮತ್ತೆ ಕೂಡಿದ ಗೆಳೆಯರ ಗೆಳೆತನ ಸಮಾನ ಸುಖದುಃಖದ ಜೂಜಾಟಕ್ಕಾಗಿ ಚಿಗುರಿತು. ಅನಂತನಿಗೆ ಒಂದು ಸಮಾಧಾನ....ತನ್ನ ಮುಂಚಿನ ಗೆಳೆಯರಲ್ಲಿ ತನ್ನಂತೆ ಸುಖವಸ್ತುವಾದ ಒಬ್ಬನಾದರೂ ದೊರಕಿದನಲ್ಲ? ಕ್ರಮೇಣ ತನ್ನ ಕತೆ ಹಮ್ಮೂನಿಗೆ ಹೇಳಿದ್ದ, ಹಮ್ಮೂನ ಕತೆಯನ್ನು ತಾನು ಕೇಳಿಕೊಂಡಿದ್ದ. ಹಮ್ಮೂ ಮಹಾಶಯರು ಮೊದಲಿನಂತೆಯೆ ಇದ್ದಾರೆ!....ಸದ್ಯಕ್ಕೆ ಸುಖ ದಿಂದಿರುವುದು ಮುಖ್ಯ ಕೆಲಸ. ಇಂದಿನ ಕಾಳಜಿ ನಾವು ಮಾಡಿದರೆ, ನಾಳಿನ ಕಾಳಜಿಯನ್ನು ಇಂದು ಮಾಡುವುದು ಎನ್ನುವ ಹಮ್ಮೂ.

"That's great philosophy. Really! ಹಮ್ಮೂ, ನೀನು ಹೇಳೋದರಲ್ಲಿ ಜೀವನದ ತತ್ತ್ವಜ್ಞಾನ ಇದೆ."

"ನೀನು"? ಅನಂತನು ಆಶ್ಚರ್ಯದಿಂದ ಅನುಭವಿಸಿದನು. ಹಮ್ಮೂನಿಗೆ "ನೀನು" ಅಂದೆ, ಅವನೂ ಹಾಗೇ ಮಾತಾಡುತ್ತಾನೆ. ಅಂತೂ ನೀನು–ತಾನು ಎನ್ನುವ ಮಟ್ಟಿಗೆ ಸ್ನೇಹಿತ ದೊರಕಿದನಲ್ಲ ಎಂದು ಅನಂತನಿಗೆ ಆನಂದ ವಾಯಿತು. ಹಮ್ಮೂನೊಡನೆ ಪತ್ರವ್ಯವಹಾರವನ್ನು ಮಾಡತೊಡಗಿದ್ದ. ಯಾವ ಕಾರಣಕ್ಕಾಗಿ ಪುಣೆ-ಮುಂಬಯಿ ಕಡೆ ಬಂದರೂ ಹಮ್ಮೂನ ಭೆಟ್ಟಿ ಯಾಗುವಂತೆ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದ. ಹಮ್ಮೂನಾದರೂ ಎಂತಹ ಅನುಕೂಲ ಗೆಳೆಯ! ಮೇಲಾಗಿ ಅತ್ಯಂತ ರಸಿಕ. ಹಮ್ಮೂನು ತನ್ನನ್ನು ಅತ್ಯಂತ ಸ್ನೇಹದಿಂದ ನೋಡುತ್ತಿದ್ದನೆಂಬುದನ್ನು ಅನಂತನು ಕಂಡಿದ್ದನು. ತನಗೆ ಹೆಂಡತಿ ಇಲ್ಲ, ಮಕ್ಕಳಿಲ್ಲ ಎಂದಾಗ ಹಮ್ಮೂನ ಮುಖದಲ್ಲಿ ಉದ್ವೇಗದ ಕಳೆಯನ್ನು ಕಂಡುದಕ್ಕೆ ಅನಂತನಿಗೆ ಆನಂದವಾಗಿತ್ತು. ಬೇರೊಂದು ಮದುವೆಯನ್ನು ಮಾಡಿಕೊಳ್ಳಬಾರದೇಕೆ—ಎಂದೂ ಕೇಳಿದ್ದ.

"ಹಮ್ಮೂ, ದುಃಖ ತಪ್ಪಿಸಿಕೊಳ್ಳೋದಾದರೆ ಸುಖ ಬಿಟ್ಟುಬಿಡಬೇಕು. That's my philosophy" ಎಂದು ತಾನು ಹೇಳಿದ್ದ.

ಮುಖ್ಯ ಮಾತೆಂದರೆ, ಹಮ್ಮೂನಿಗೆ ದುಡ್ಡಿನ ತೊಂದರೆ ಇದ್ದಿಲ್ಲ. ಇದುವರೆಗೆ ತನ್ನ ಕಡೆ ದುಡ್ಡನ್ನು ಬೇಡಿಯಾಗಲಿ ಬೇರೆ ಯಾವ ರೀತಿಯಿಂದಲೆ

ಕೆಲಸವನ್ನು ಮಾಡಿಸಿಕೊಳ್ಳುವವರೇ ಬರುತ್ತಿದ್ದರು; ಹಮ್ಮೂನು ಮಾತ್ರ ಗೆಳೆತನಕ್ಕಾಗಿ ಗೆಳೆಯ ಎಂದುಕೊಂಡಿದ್ದ ಅನಂತ. ಜೂಜಾಟದ ಪಟಾಂಗಣ ದಲ್ಲಾಗಲಿ, ಉಪಾಹಾರದ ಭವನಗಳಲ್ಲಾಗಲಿ, ಸಿನೆಮಾಮಂದಿರಗಳಲ್ಲಿ ದುಡ್ಡು ಕೊಡಲಿಕ್ಕೆ ಹಮ್ಮೂನು ಯಾವಾಗಲೂ ಮುಂದಾಗುವನು. ಅದಕಾಗಿ ಅನಂತನಿಗೆ ಅವನಲ್ಲಿ ಆದರ. ಇತ್ತಿತ್ತಲಾಗಿ, ಗೆಳೆಯರಿಗಾಗಿ ವೆಚ್ಚ ಮಾಡು ವುದರಲ್ಲಿ ಹಮ್ಮೂನಿಗೆ ಆನಂದವಿದೆ ಎಂದು ಕಂಡು, ಅವನನ್ನು ನಿರಾಶೆಗೊಳಿ ಸುವ ಧೈರ್ಯವಿಲ್ಲದ್ದಕ್ಕಾಗಿ ಅನಂತನು ಅವನಿಗೇ ವೆಚ್ಚ ಮಾಡುವ ಅವಕಾಶ ವನ್ನು ಕೊಡುತ್ತಿದ್ದನು. ಅಂತೂ, ಇಬ್ಬರ ಸ್ನೇಹ ನಿಕಟವಾಗುತ್ತ ನಡೆದಿತ್ತು. ಪರಸ್ಪರ ಬಿಚ್ಚುಮನಸ್ಸಿನಿಂದ ಮಾತನಾಡುವಷ್ಟರ ವರೆಗೆ ಸಲುಗೆ ಹುಟ್ಟಿತು. ಒಂದು ದಿನ ಜೂಜಾಟದಿಂದ ಮರಳುವಾಗ ತಾವಿಬ್ಬರೂ ಅತ್ಯಂತ ಉಲ್ಲಾಸ ದಲ್ಲಿದ್ದರು. ಇಬ್ಬರಿಗೂ ಲಾಭವಾಗಿತ್ತು. ಮಾತಿನ ಭರದಲ್ಲಿ ಅನಂತನು ಹಮ್ಮೂನನ್ನು ಹಾಟೆಲಿಗೆ ಕರೆದನು. ತಾವಿಬ್ಬರೂ ಹೊರಟು ಹಾಟೆಲದ ಹತ್ತಿರ ಬಂದ ಮೇಲೆ ತನಗೆ ಸಂಶಯ ಬಂದಿತು. ಹಮ್ಮೂನನ್ನು ಕರೆದದ್ದು ಯೋಗ್ಯವಾಯಿತೆ? ಈಗ ಹಾಟೆಲದಲ್ಲಿ ಹೋಗಿ ನಾನು 'boy' ಎಂದು ಆಳನ್ನು ಕರೆಯುವುದೊಂದೇ ತಡ ಅವನು ವಿಸ್ಕಿಪೇಯ ತರುವನು. ಹಮ್ಮೂನ ವಿಚಾರ ಹೇಗಿದೆಯೊ?....ನಿರ್ಣಯಕ್ಕೆ ಬರುವ ಮುಂಚಿತವಾಗಿ ಹಾಟೆಲಿಗೆ ಬಂದು ಸೇರಿದ್ದರು. ಸುದೈವದಿಂದ ಆಳು ಮೊದಲೇ ಭೆಟ್ಟಿಯಾದನು. ಅನಂತನು ಮೆಲ್ಲಗೆ ಅವನಿಗೆ ತನ್ನ ಗೆಳೆಯ ಇರುವವರೆಗೆ ಚಹವನ್ನೆ ತರ ಬೇಕೆಂದು ಹೇಳಿದನು. ಇಬ್ಬರೂ ಕುಳಿತುಕೊಂಡರು. ಹಮ್ಮೂನು ಅತ್ತಿತ್ತ ನೋಡಿದನು. ಸಾಮಾನ್ಯವಾಗಿ ಎಲ್ಲರೂ ವಿಸ್ಕಿಯನ್ನೊ ಮತ್ತೇನನ್ನೊ ಮದ್ಯ ವನ್ನೆ ಕುಡಿಯುತ್ತಿದ್ದರು.

"ಇಲ್ಲಿ ಏನು ಅಡ್ಡಿ ಇಲ್ಲ ಅಂಥಾಂಗ ಕಾಣ್ತದ" ಎಂದ ಹಮ್ಮೂ.

ಅನಂತನಿಗೆ ಸಂದರ್ಭ ಸ್ಪಷ್ಟವಾಗಿರಲಿಲ್ಲ. ಅದಕಾಗಿ ಅವಸರವಸರ ವಾಗಿ "ಛೆ! ಛೆ! ಏನೂ ಅಡ್ಡಿ ಇಲ್ಲ. ಎಲ್ಲಾರು ಕುಡಿಯೋದನ್ನೆ ಕುಡಿಯ ಬೇಕಂತಿಲ್ಲ, ಏನಿಲ್ಲ. ಅದ್ಯಾಕೆ? ನಾನು ಇಲ್ಲಿ ಯಾವಾಗಲೂ ಚಹಾನೇ ಕುಡಿತೀನಿ" ಎಂದ.

"ಚಹ ಕುಡಿತಿಯಾ?" ಹಮ್ಮೂ ಆಶ್ಚರ್ಯದ ದನಿಯಲ್ಲಿ ಕೇಳಿದ.

ಅನಂತ ಅತ್ಯಂತ ಸಂಭಾವಿತತನದ ಮುಖಮುದ್ರೆಯಿಂದ ತಲೆ ತೂಗಿದ.

" ಚಹ! ಈ ಜಾಗೆಯಲ್ಲಿ! ಹಹ!" ಹಮ್ಯೂನು ಮನಃಪೂರ್ತಿಯಾಗಿ ನಗತೊಡಗಿದ. " ಅಲ್ಲೊ, ಅನಂತಾ, ಇಂಗ್ಲಂಡಕ ಹೋಗಿ, I. C. S. ಆಗಿ, ಇಂತಹ ಜಾಗೆಯೊಳಗ ಚಹ ಕುಡೀತಿದ್ದರೆ ಅದು ನಿನ್ನ ಜಬಾಬ್ದಾರಿಕೆ. ನನಗಂತೂ ಶಕ್ಯ ಇಲ್ಲ."

ಅನಂತನಿಗೆ ಪಶ್ಚಾತ್ತಾಪವಾಯಿತು ಈ ಪ್ರಾಣಿಯನ್ನು ಕರೆದುತಂದುದಕ್ಕೆ. " ನಮ್ಮಷ್ಟಕ್ಕೆ ನಾವು ಚಹ ಕುಡಿದರಾಯ್ತಲ್ಲ? ಈ ಜಾಗಾದೊಳಗ ಮಿಕ್ಕವರು ಬೇಕಾದ್ದ್ಮಾಡಲಿ" ಎಂದ.

" ನೀನು ಚಹ ಕುಡಿ ಹಾಗಾದರೆ. ನಾನು ಮಿಕ್ಕವ ಆಗ್ತೀನಿ."

" ಏನು! ಏನಂದೆ, ಹಮ್ಯೂ! ನೀನು—?"

" ನಾನು ವಿಸ್ಕಿ ಕುಡಿಯುವವ!"

ಅನಂತನು ಉಸುರ್ಗರೆದನು, ಬೆಮರೊರೆಸಿಕೊಂಡನು. " ಮಹಾರಾಯಾ, ನೀನು ಏನು ಅಂತೀಯೋ ಅನ್ನೋ ಹೆದರಿಕೆಗೆ ನಾನು ಆ ಹಾಳು ತೊಪ್ಪಲ ಬಿಸಿ ನೀರು ಕುಡಿಯಲಿಕ್ಕೆ ತಯಾರಾದೆ. ಬಾಯ್, ಬಾಯ್! ದೋ ಛೋಟಾ—"

"— ದೋ ಛೋಟಾ ಸಾಬಕೋ ದೋ ಬಡಾ ವಿಸ್ಕೀ ಲಾವ್" ಎಂದ ಹಮ್ಯೂ.

ತಾವಿಬ್ಬರೂ ಮನಃಪೂರ್ತಿಯಾಗಿ ನಕ್ಕಿದ್ದರು.

ಮಾತಿಗೆ ಮಾತು ಬೆಳೆಯಿತು. ಹಮ್ಯೂನು " ಮನೆ"ಗೆ ಹೊರಟ.

" ಮನೆ ಅನ್ನುವಿಯಲ್ಲ? ಹಾಟೆಲ್ ಅನ್ನು" ಎಂದ ಅನಂತ.

" ಹಾಟೆಲು ಹಗಲಿನಲ್ಲಿ. ರಾತ್ರಿ ಮನೆಯಲ್ಲಿ."

" ಓಹೊ! ನೀನು ಮುಂಬಯಿಯಲ್ಲಿಯೆ ಇರುವೆ ಏನು ಹೆಂಡಿರು-ಮಕ್ಕಳೊಡನೆ?"

" ಹೆಂಡಿರು-ಮಕ್ಕಳು! ಅವರನ್ನು ತಪ್ಪಿಸೋದಕೆ ಅಂತ ಮುಂಬಯಿಗೆ ಬಂದರೆ ನೀನೂ—"

ಅನಂತನಿಗೆ ತಿಳಿಯದಾಯಿತು; " ಅಲ್ಲ, ಮನೆ ಅಂತ ಅಂದಿ, ಅದಕೆ"

ಹಮ್ಮೂ್ರನು ನಕ್ಕ. "ಅನಂತಾ, ಹೆಂಡತಿಯನ್ನು ಕಳೆದುಕೊಂಡು ಬುದ್ಧಿಯನ್ನೂ ಕಳೆದುಕೊಂಡೆ ನೀನು. ಬೇಕಾದರೆ ನಿನಗೂ ಒಂದು ಮನೆ ಮಾಡಿಸಿಕೊಡುವೆ, ನಡೆ" ಎಂದನು.

ಅಂತೂ, ಹಮ್ಮೂ್ರನ ಸ್ನೇಹ ಬೆಳೆದಿತ್ತು. ಹಮ್ಮೂ್ರ ನಿಜವಾಗಿ ಸುಖಜೀವಿ ಎಂದು ಅನಂತನು ಅರಿತನು. ಕ್ರಮೇಣ ಅವನ ಸಹವಾಸದಲ್ಲಿ ತಾನೂ ಸುಖಜೀವಿಯಾದನು. ಮುಂಚಿನ ಗೆಳೆಯರಲ್ಲಿ ಹಮ್ಮೂ್ರನೊಬ್ಬನೆ ಸುಸಂಸ್ಕೃತ, ಸಹವಾಸಕ್ಕೆ ಯೋಗ್ಯ ಎಂದೆನಿಸಿತು. ಆದರೆ ಇದೇ ಹಮ್ಮೂ್ರನೇ ಒಂದು ದಿನ ಮಾಧವನನ್ನು ಕರೆದುಕೊಂಡು ಬಂದನು! ಮಾಧವನೆಲ್ಲಿ? ಹಮ್ಮೂ್ರನೆಲ್ಲಿ? ಅನಂತನಿಗೆ ಅರ್ಥವೆ ಆಗಲಿಲ್ಲ. ಒಂಬತ್ತು ವರ್ಷಗಳ ತರುವಾಯ—ಅಹುದಲ್ಲವೆ?—ಆಗ ಅಗಸ್ಟ ೧೯೩೦, ಈಗ ಸಪ್ಟೆಂಬರ ೧೯೩೯-ಅಹುದು—ಒಂಬತ್ತು ವರ್ಷಗಳ ತರುವಾಯ ತಾನು ಮಾಧವನನ್ನು ನೋಡುತ್ತಲಿದ್ದಾನೆ.

"ಹೆಲ್ಲೊ!" ಎಂದನು ತಾನು ಆಶ್ಚರ್ಯದ ದನಿಯಲ್ಲಿ.

"ಹೆಲೊ ಅಂದ್ರ ಹಲ್ಲು ಮುರಿದಾನು, ವಂದೇ ಮಾತರಂ ಅನ್ನಬೇಕು ಅವನಿಗೆ" ಎಂದ ಹಮ್ಮೂ್ರ.

"ಇನ್ನೂ ಅಷ್ಟರ ಮಟ್ಟಿಗೆ ನಾನು ಸೌಜನ್ಯ ಬಿಟ್ಟಿಲ್ಲ, ಅನಂತಾ" ಎಂದನು ಮಾಧವ.

ಅನಂತನ ಎದೆ ಚುಚ್ಚಿದಂತಾಯಿತು. ಹಮ್ಮೂ್ರನ ಸಲುಗೆಯನ್ನು ತಾನೂ ವಹಿಸಿಕೊಂಡು ಏಕವಚನದಲ್ಲಿ ನನ್ನನ್ನು ಮಾತನಾಡಿಸುವನಲ್ಲ? What cheek! ಒರಟು! ಎಂದುಕೊಂಡನು.

ಮುವ್ವರೂ ಅನಂತನ ಕೋಣೆಯಲ್ಲಿಯೆ ಕುಳಿತಿದ್ದರು.

"ನನಗ ಟೊಪ್ಪಿಗೆ ಹಾಕಲಿಕ್ಕೆ ಬಂದಿದ್ದ ಮಾಧವ. ಜಾರಿಕೊಂಡು ನಿನ್ನ ಕಡೆ ಕರೆದುಕೊಂಡು ಬಂದೀನಿ."

ಹಮ್ಮೂ್ರನ ಅರ್ಥ ತಿಳಿಯದೆ ಅನಂತನು ಒಮ್ಮೆ ಹಮ್ಮೂ್ರನನ್ನೂ ಒಮ್ಮೆ ಮಾಧವನನ್ನೂ ಚಕಿತದೃಷ್ಟಿಯಿಂದ ನೋಡಿದ.

ಮಾಧವನು ನಗೆಯಿಂದ ಹೇಳಿದ, "ಟೊಪ್ಪಿಗೆ ಹಾಕೋದು ಅಂದ್ರೆ ನಾನು ಕೈಯೊಳಗ ಟೊಪ್ಪಿಗೆ ಹಿಡಿದುಕೊಂಡು ಬಂದಿನೀ ಅಂತ ಹಮ್ಮೂ್ರನ ಅರ್ಥ."

ಅನಂತ ಬಿಗಿದು ಕುಳಿತ. ಹಮ್ಯಾನ ಕೂಡ ವ್ಯವಹಾರ ಬೇರೆ, ಈ 'ಉಡಾಳ'ನ ಕೂಡ ವ್ಯವಹಾರ ಬೇರೆ. ಇವನು ಈಗಾಗಲೆ ಅನೇಕ ಸಲ ಜೇಲಿಗೆ ಹೋಗಿ ಬಂದವನು. ಹೆಂಡತಿ ತೀರಿಕೊಂಡದ್ದಕ್ಕೆ ದುಃಖದ ಒಂದು ಸುಳಿವು ಇಲ್ಲದೆ ಹೊರಟಿದ್ದಾನೆ ಬೇಜಬಾಬ್ದಾರ!

"ನಮ್ಮ. ನಿಮ್ಮ ವ್ಯವಹಾರವೆ ಶಕ್ಯವಾಗದು ಎಂದು ನನ್ನ ಅಭಿಪ್ರಾಯ" ಅಧಿಕಾರವಾಣಿಯಿಂದ ನುಡಿದ ಅನಂತ. ಮಾಧವ ಒಂದು ನಿಮಿಷ ಸುಮ್ಮನಿದ್ದ. ಹಮ್ಯಾನೆ ಹಲ್ಲುಕಿರಿದು ಹೇಳಿದ: "ಇವರು ಎಲ್ಲಾರ ಕೂಡ ವ್ಯವಹಾರ ಇಡ್ತಾರ. ಬೇಡೋದು ಅಂದ್ರ ಬೇಡೋದು, ಎಲ್ಲಾರಿಗೂ ಬೇಡೋದು."

"ಏನದು ಬೇಡೋದು?" ಅನಂತ ಕೇಳಿದ.

"ದುಡ್ಡು—ಅಂದ್ರೆ—ಫಂಡು."

"ಹಮ್ಯಾ, ಫಂಡಿನ ಮ್ಯಾಲೆ ಜೀವನ ನಡೆಸೋದು ಈ ವಯಸ್ಸಿನ ವರಿಗೆ—"

ಅನಂತನ ಮಾತಿನೊಡನೆಯೆ ಮಾಧವ ಪುಟದೆದ್ದ. ತಟ್ಟನೆ ಅವನನ್ನು ಹಮ್ಯಾ ತಡೆದು "ಅನಂತಾ, ಹಾಗಲ್ಲ....ತಡೆಯೊ, ಮಾಧೂ! ನಾನೆಲ್ಲಾ ಹೇಳ್ತೀನಿ....ಅನಂತಾ, ಅವನ್ನ ನೋಡಬ್ಯಾಡ, ನನ್ನ ನೋಡಿಲ್ಲಿ. ಅವನ್ನ ಮಾತಾಡಗೊಟ್ಟರೆ ಲೆಕ್ಚರ ಪ್ರಾರಂಭ ಆಗ್ತದ ಅಂತೇ ತಡದೀನಿ ಅವನ್ನ, ಮತ್ತೇನೂ ಅಲ್ಲ....ಈ ಗಾಂಧಿ ಕಾಂಗ್ರೆಸದದ ಜನ ಸ್ವಂತದ ಸಲುವಾಗಿ ಒಂದುಡ್ಡು ಬೇಡೋದಿಲ್ಲ. ಅಷ್ಟು ಹುಚ್ಚರಿದ್ದಾರೆ ಅನ್ನು ಬೇಕಾದ್ರೆ....ಈಗ ಮಾಧೂ ಬಂದದ್ದು ಒಂದು ಸಾರ್ವಜನಿಕ ಫಂಡಿಗಾಗಿ....ನೀನು ಇಲ್ಲಿ ಇದ್ದೀ ಅಂತ ಹೇಳಿ ನಾನೇ ಕರೆದುಕೊಂಡು ಬಂದೆ ಇವನ್ನ....ಆಯ್ತಿಲ್ಲೊ, ಮಾಧೂ? ನೀನು ಒಂದು-ಒಂದುವರೆ ತಾಸಿನೊಳಗ ಹೇಳಬೇಕಾದದ್ದನ್ನ ನಾ ಒಂದು ಮಿನಿಟಿನೊಳಗ ಹೇಳಿದೆನೊ ಇಲ್ಲವೊ?....ಕೂಡಿನ್ನು....ಕೊಡು, ಮಹಾರಾಯಾ, ಮೊದಲು. ನಿಂತರೆ ನಿಮ್ಮಂದೀಗೆ ಲೆಕ್ಚರ ಕೊಡೋ ಆವೇಶನೆ ಬರೋದು....ಕೂಡು....ಇಷ್ಟಿದೆ ನೋಡು, ಅನಂತಾ, ಈ ಕತೆ..........." ಎಂದನು.

ಅನಂತನಿಗೆ ಆಶ್ಚರ್ಯವಾಯಿತು. ಸಂದರ್ಭ ಕೆಡಬಾರದೆಂದು, ಯತ್ನಿಸುತ್ತಿರುವನಲ್ಲ ಈತ! ಇವನಿಗೆ ಈ ಮಾಧವನಿಂದ ಆಗಬೇಕಾದದ್ದೇನು? ಈಗ ಈ ಮಾಧವನನ್ನು ಅರ್ಧಚಂದ್ರ ಕೊಟ್ಟು ದಬ್ಬಿ ಬಿಡಬಾರದೇಕೆ? ಯಾರ ಕೆಲಸ? ಯಾವ ಫಂಡು? ಕಾಲೇಜ ಬಿಟ್ಟದ್ದಕ್ಕೆ ಇದೇ ಹೊಟ್ಟೆ ತುಂಬಿಕೊಳ್ಳುವ ವಿದ್ಯೆಯಾದಂತೆ ಕಾಣುತ್ತದೆ! Disgusting! ಹ್ಞುಂ—

"I am very sorry" ಎಂದನು ಅನಂತ.

"ಸಾಹೇಬರ ಮಾತಿನ ಅರ್ಥವಾಗಲಿಲ್ಲ" ಅಣಕಿನಿಂದ ಹಮ್ಯೂನಿಗೆ ಹೇಳಿದನು ಮಾಧವ.

"You—you—you get out!" ಎಂದು ಅನಂತನು ಗದ್ದರಿಸುತ್ತ ಕುರ್ಚಿಯಿಂದೆದ್ದನು.

"ಅನಂತಾ, ತಡೆ—" ಹಮ್ಯೂನು ಇಬ್ಬರ ನಡುವೆ ಬಂದು ನಿಂತನು.

ಮಾಧವನು ಕದಲಲಿಲ್ಲ. ಅವನನ್ನು ನೋಡಿ 'ನಾಚಿಕೆಗೇಡಿ' ಎಂದುಕೊಂಡನು ಅನಂತ. ಮಾಧವನ ಮುಖದಲ್ಲಿ ಮುಗಳ್ನಗೆ ಮೂಡಿತು. ಅದನ್ನು ಕಂಡು ಕಿಸೆಯಲ್ಲಿಯ ರಿವಾಲ್ವರಿಗೆ ಅನಂತನ ಕೈ ತಟ್ಟಿತು. ಮಾಧವ ನಗೆಯಿಂದಲೆ ಹೇಳಿದ:- "ಹಮ್ಯೂ, ಬ್ರಿಟಿಶರ ವಿರುದ್ಧ ಅಹಿಂಸೆ ಎಂಬ ಮಾತು ನಿಜ. ಆದರೆ ನಮ್ಮವರ ವಿರುದ್ಧ ಅಹಿಂಸೆ ತಪ್ಪು ಎಂದೆನಿಸುತ್ತಿದೆ."

"ಬಿಕ್ಕೆ ಬೇಡುವವರಿಗೆ ಸೊಕ್ಕು ನಡೆಯದು, ನಡೆಯದು ಅಂದೆ" ಅನಂತ ಮೂದಲಿಸಿದ.

"ಬಿಕ್ಕೆ? ಬಿಕ್ಕೆ! ಹಃ!" ಅತ್ಯಂತ ತಿರಸ್ಕಾರದಿಂದ ಮಾಧವ ಮಾತನಾಡಿದ. "ನಾನು ಬೇಡುವುದು ಬಿಕ್ಕೆಯಲ್ಲ. ಇಂದು ಅನ್ಯಾಯದ ವಿರುದ್ಧ ಉಪವಾಸ ಮಾಡಿ ಮರಣೋನ್ಮುಖನಾಗಿದ್ದಾನೆ ತರುಣ ವೀರ ಜತೀನದಾಸ. ಅವನ ಸಹಾಯಕ್ಕೆ ಮಾಡುವ ಸೇವೆ ಇದು. ಮತ್ತೂ, ನೀನು ಕೊಡುವುದು ದಾನವಲ್ಲ. ದೇಶದ ಬಡವರನ್ನು ಹೀರಿ ಸುಲಿದ ದುಡ್ಡಿನಲ್ಲಿ ಅನ್ಯಾಯದಿಂದ ದೊರಕುತ್ತಿರುವ ಋಣಗೂಳು—ಅದು ನಿನ್ನ ಕರ್ತವ್ಯ. ಆದರೆ, ನಿನ್ನಂತಹನ ಮನಸ್ಸಿನ ಮೈಲಿಗೆ ಬೇಡ."

ಮಾಧವನು ಹೋಗಿಯೆ ಬಿಟ್ಟಿದ್ದನು. ತಾನು ಹಮ್ಯೂನನ್ನು ನೋಡುವಷ್ಟರಲ್ಲಿ ಮಾಧವನು ಜಾರಿಕೊಂಡಿದ್ದನು. ಬದಮಾಷ್! ಎಂದನು ಅನಂತ.

" ಆದರೂ ನೀನು ಸಿಟ್ಟಿಗೇಳಬಾರದಾಗಿತ್ತು. ಬಂದವನ ಮೋರೆಯ ಮೇಲೆ ನಾಲ್ಕು ದುಡ್ಡು ಒಗೆದರಾಯಿತು—"

" ಹಮ್ಮೂ ! ಇಂತಹರನ್ನು ನೀನು ಹೇಗೆ ತಡೆದುಕೊಳ್ಳುವಿ, ಯಾಕೆ ತಡೆದುಕೊಳ್ಳುವೆ–ನನಗೆ ತಿಳಿದಿಲ್ಲ. ಆದರೆ ಇನ್ನೊಮ್ಮೆ ನನ್ನ ಕಣ್ಣೆದುರು ಬಂದರೆ—" ಕಿಸೆಗೆ ಕೈ ಹಚ್ಚಿ ರಿವಾಲ್ವರನ್ನು ಸೂಚಿಸಿದ ಅನಂತ. " ಜತೀನ ದಾಸನಂತೆ ! ಉಪವಾಸ ಅಂತೆ ! ತಿನ್ನಲು ಬುದ್ಧಿ ಇಲ್ಲದವರಿಗೆ ಜೀವಿಸುವ ಅಧಿಕಾರವೇ ಇಲ್ಲ ! "

. . . . .

೨೧

ಅನಂತನು ಒಮ್ಮೆಲೆ ಗದಗದ ನಡುಗಿದನು, ಕುರ್ಚಿಯಲ್ಲಿ ಕುಳಿತು ಕೊಂಡನು. ಯಾಕೆ ತನಗೀ ವಿಚಾರ ? ಇಪ್ಪತ್ತು ವರುಷಗಳ ಹಿಂದಿನ ಮಾತು, ಈಗ ಅದರ ಸಂಬಂಧವೇನು ನೆನೆದುಕೊಳ್ಳುವುದಕ್ಕೆ ? ಹಮ್ಮೂ? ಮಾಧವ ?....ಅನಂತನ ಮುಖದಲ್ಲಿ ನಗೆ ಮಿಂಚಿತು. । " ಬದಮಾಷ್ "— ನಿಜ; ಆದರೆ ಯಾರು ಬದಮಾಷ್ ? ಈ ೧೯೪೭ನೆಯ ಇಸ್ವಿಯಲ್ಲಿ ಈ ಪ್ರಶ್ನೆ ಯನ್ನು ತನಗೆ ಯಾರಾದರೂ ಕೇಳಿದ್ದರೆ, " ಹಮ್ಮೂನೆ ಬದ್ಮಾಷ್ " ಎಂದು ನಿರ್ದಾಕ್ಷಿಣ್ಯವಾಗಿ ತಾನು ಹೇಳುತ್ತಿದ್ದ. ಎಲ್ಲಿಂದೆಲ್ಲಿಗೆ ? ಆ ಹಮ್ಮೂ ಇಂದು ಶಾಸನ ಸಭೆಯ ಸದಸ್ಯ ! ಅಂದಿನಿಂದಲೆ ಹೊಂಚುಹಾಕಿದ್ದ ಆ ತುಡುಗ !

" ಅಲ್ಲೊ, ಅನಂತಾ, ನಿನಗೆ ವ್ಯವಹಾರ ಜ್ಞಾನ ಕಡಮೆ ನೋಡು. ಆಗಾಗ ನಾಲ್ಕು ದುಡ್ಡು ಕೊಟ್ಟುದಕ್ಕೆ ನಮ್ಮ ಸುಖದ ಜೀವನದಲ್ಲಿ ನಮ್ಮನ್ನು ಬಿಡುವ ಆ ಮಾಧವನಂತಹರ ಮೇಲೆ ಒದರಾಡುವುದು ಏನು ಅಗತ್ಯ ವಿದ್ದಿತು ? " ಎಂದಿದ್ದ ಹಮ್ಮೂ.

" ಆದರೂ ಅಂತಹ ಉದ್ದಾಮರನ್ನು ತಡೆದುಕೊಳ್ಳುವ ಅಗತ್ಯ ವಾದರೂ ಏನು ? "

" ಇದಕ್ಕೆ ದೂರದೃಷ್ಟಿ ಬೇಕು, ವ್ಯವಹಾರಜ್ಞಾನ ಬೇಕು. ಆಯ್. ಸಿ. ಎಸ್. ಅನಂತನಿಗಿಂತ ಹಳ್ಳಿಯ ಹನುಮಂತಗೌಡನೇ ಭಲೆ ನೋಡು ಇದಕ. ಅಲ್ಲೊ, ನಮ್ಮದೇನು ಗಂಟು ಹೋಗ್ತದ, ಹುಂ ಅನ್ನವನ ಜೋಡಿ ಹುಂ ಅನ್ನಲಿಕ್ಕೆ ? ಯಾವಾಗ್ಯಾವಾಗಾದರೂ ಬರ್ತಾರೆ, ಆ ಘಂಡು

ಈ ಫಂಡು ಅಂತ. ಐದು ರುಪಾಯಿ ಕೈಯಿಂದ ಕೊಟ್ಟ, ಐವತ್ತು ರುಪಾಯಿ ಕೂಡಿಸಿಕೊಟ್ಟ. ದೊಡ್ಡ ಮನುಷ್ಯ ಆದ ಗೋಲ್ಡನ್ ಗೌಡ! ಇಷ್ಟಾದರೂ ತ್ರಾಸ ಯಾಕೆ ಅಂತೀಯಲ್ಲ? ನಾಳೆ ಇವರಂತೆ ಆಯ್ತು ಅಂತ ತಿಳಿ; ಆ ವ್ಯಾಳ್ಯಾಕ್ಕ ನಾವು ಕೆಟ್ಟಾಗಿ ಕೂತಿದ್ದರ ನಮ್ಮದೆ ಹುಚ್ಚುತನ. ಹೌದಂತೀಯೊ ಇಲ್ಲಂತೀಯೊ? ಬೇಕಾದ್ರ ವಿಚಾರ್ಮಾಡಿ, ನೋಡಿ ಹೇಳು. ಇಂಗ್ಲಂಡ–ಅದು–ಇದು ಅಂತ ಹೊರಗೆ ತಿರುಗಾಡಿ ಬಂದೀದಿ."

ಹಮ್ಮ್ಯಾನ ಅಂದಿನ ಮಾತು ಈಗ ಮತ್ತೆ ಅನಂತನ ಸ್ಮರಣೆಗೆ ಬಂದಿತು. ನಿಜವಾಗಿ ರಾಜಕಾರಣಿ ಹಮ್ಮ್ಯಾ. ಪಾಪ, ಆ ಮಾಧವ—ಥೂ! ಯಾಕೊ, ತನಗೆ ಅವನ ಹೆಸರು ಕೂಡ ಸಹನವಿಲ್ಲವಲ್ಲ? ಕಾಲೇಜದಲ್ಲಿದ್ದಾಗ ಅವನು ಸ್ಕಾಲರ್ ಎಂದು ತನಗೆ, ತಾನು ಇಂಗ್ಲಂಡಕ್ಕೆ ಹೋದವನೆಂದು ಅವನಿಗೆ ಒಳಗೊಳಗೆ ಅಸೂಯೆ ಇದ್ದಿರಬಹುದೆ? ಇಲ್ಲವಾದರೆ, ಹೆಸರು ತೆಗೆದಾಗೊಮ್ಮೆ, ಭೆಟ್ಟಿಯಾದಾಗೊಮ್ಮೆ ತನಗೆ ಇಷ್ಟೊಂದು ಅಸಹ್ಯತೆಯು ಸಿಟ್ಟು ಬರುವುದೇಕೆ? ನಿಜವಾಗಿ ಆ ಮಾಧವನೂ ಮೂರ್ಖ; ಹಮ್ಮ್ಯಾನಂತಹನೊಡನೆ ಹೋಲಿಸಿದರೆ ಶತಮೂರ್ಖ. ತನ್ನ ಅವಸ್ಥೆಗೆ ತಾನೇ ಕಾರಣನಾಗಿದ್ದಾನೆ. ಅಲ್ಲ–ತನ್ನ ಯೋಗ್ಯತೆ ಏನು–ಸ್ಥಾನವೇನು? ತನಗಾಗಿ ತಾನು ದೊಡ್ಡವ ಎಂದು ತಿಳಿದುಕೊಳ್ಳುವ ಸೊಕ್ಕು ಏನು? ಆದರೂ, ಇನ್ನು ಒಂದು ಗಂಟೆಯೊಳಗಾಗಿ ಹೊರಡಲೇ ಬೇಕು. ಅಂದು ಮಾಧವ ತನ್ನ ಹೊಟೆಲಿಗೆ ಬಂದ ಮೇಲೆ ಇಬ್ಬರ ಭೆಟ್ಟಿಯೆ ಇಲ್ಲ ಎನಬಹುದು; ಇಂದು ತಾನು ಅವನ ಮನೆಗೆ ಹೊರಟದ್ದಾನೆ. ಭೆಟ್ಟಿ–? ಅದೇಕೆ? ಭೆಟ್ಟಿಯಾಗಿತ್ತಲ್ಲ ಎರಡು ಸಲ? ಒಂದು ಪ್ರಸಂಗವನ್ನಂತೂ ಮರೆಯುವಂತಲೇ ಇಲ್ಲ.

. . . . .

ಮಾಧವನು ಹೊಟೆಲಿಗೆ ಬಂದು ಹೋದ ದಿನ ಅನಂತನಿಗೆ ಅವಮಾನವಾದಂತಾಗಿತ್ತು. ಅನಂತ-ಮಾಧವ ಎಂಬ ಎರಡು ವ್ಯಕ್ತಿಗಳ ಸಂಘರ್ಷಣೆ ಇದಲ್ಲ ಎಂದು ತಿಳಿದುಕೊಂಡಿದ್ದ ಅನಂತ. ತಾನು ಆಯ್. ಸಿ. ಎಸ್. ಅಧಿಕಾರಿ; ಸರಕಾರದ ಪ್ರಭುತ್ವದ ಪ್ರತಿನಿಧಿ ತಾನು. ಅವನೊ—ಹೊಟ್ಟೆಗೆ ಗತಿ ಇಲ್ಲದ ಭಿಕಾರಿ; ಸರಕಾರದ ಶತ್ರುಪಕ್ಷದ ಪ್ರತಿನಿಧಿ. ತನಗಾದ ಅಪಮಾನ ಸರಕಾರಕ್ಕಾದಂತೆ ಎಂದು ಕನಲಿದನು ಅನಂತನು. ಮರುದಿವಸ ಅವನು

ಪುಣೆಗೆ ಹೋಗಲಿಲ್ಲ. ರೇಸ್‌ಕೋರ್ಸಿನ ಮೇಲೆ ನಗುತ್ತಲಿರುವ ಹಮ್ಮೂನನ್ನು ಎದುರಿಸುವುದು ಅಶಕ್ಯವೆನ್ನಿಸಿತು ಅವನಿಗೆ. ಸಂಜೆಯ ವರೆಗೆ ಹೊಟಿಲಿನಲ್ಲಿಯೂ ಇರಲಿಲ್ಲ, ಮತ್ತೆ ಆ ಉಪದ್ವ್ಯಾಪಿ ಬಂದಾನಲ್ಲ ಎಂದು. ಹಾಗೂ ಹೀಗೂ ಹಗಲನ್ನು ಕಳೆದು ರಾತ್ರಿಯ ಗಾಡಿಗೆ ಮುಂಬಯಿಯನ್ನು ಬಿಡಬೇಕೆಂಬ ವಿಚಾರದಿಂದ ಸುಮಾರು ಸಂಜೆಯ ಏಳು ಗಂಟೆಗೆ ಅವನು ಹೊಟಿಲಿಗೆ ಮರಳಿದನು. ಸೇವಕನು ಅತ್ಯಂತ ಉತ್ಸುಕತೆಯಿಂದ ದಾರಿ ಕಾಯುತ್ತಿದ್ದಾನೆ. ಯಾಕೆ? ಏನಾಗಿದೆ? ಅರ್ಜೆಂಟ್ ಮೆಸೇಜ! ಎಲ್ಲಿಂದ? ಯಾರು ಈ ಅವಸರದ ಕರೆಯನ್ನು ಕೊಟ್ಟವರು? ಅನಂತನು ಬರೆದಿಟ್ಟ ಕಾಗದವನ್ನು ನೋಡಿದನು. ಹಾಸ್ಪಿಟಲ್? ಯಾವುದು—? ಈ ಆಸ್ಪತ್ರಿಯಲ್ಲಿ ನನ್ನ ಕೆಲಸವೇನು?—ಆದರೆ ಅನಂತನಿಗೆ ತಡೆಯಲಿಲ್ಲ. ಯಾರೊ ತನ್ನವರು ಘೋರ ಅವಸ್ಥೆಯಲ್ಲಿ ಆಸ್ಪತ್ರಿಯಲ್ಲಿ ಬಿದ್ದುಕೊಂಡಿದ್ದಾರೆ—ಎಂಬ ಗ್ರಹಿಕೆಯಾಯಿತು. ಅಭ್ಯಾಸದ ಬಲದಿಂದ ಗಡಿಯಾರವನ್ನು ನೋಡಿದನು. ಕೆಳಗೆ ಕ್ಯಾಲೆಂಡರ ಇದ್ದಿತು. ತನಗೆ ಸಂದೇಶ ಮುಟ್ಟಿದ ವೇಳೆ ಸಾಯಂಕಾಲದ ೭-೧೫; ಅಂದಿನ ದಿನ ೧೯೫೫ರ ಸಪ್ಟೆಂಬರ ೧೩. ಅನಂತನು ಅವಸರವಸರವಾಗಿ ಆಸ್ಪತ್ರಿಗೆ ತಾನು ಕೂಡಲೆ ಬರುವ ಬಗ್ಗೆ ಟೆಲಿಫೋನಿನಿಂದ ತಿಳುಹಿಸಿ ಹೊರಬಿದ್ದನು.

ಅನಂತನು ದಿಗ್ಭ್ರಾಂತನಾದವನ ಕಳೆಯಿಂದಲೆ ಆಸ್ಪತ್ರಿಯ ಬಾಗಿಲಿನಲ್ಲಿ ಟ್ಯಾಕ್ಸಿಯಿಂದ ಕೆಳಗಿಳಿದನು. ಯಾರು—ಗೊತ್ತಿಲ್ಲ; ಏನಾಗಿದೆ—ಗೊತ್ತಿಲ್ಲ. ಆದರೆ ತಾನು ಯಾರು ಎಂಬುದು ಮಾತ್ರ ಎಲ್ಲರಿಗೂ ಗೊತ್ತಿದ್ದಂತೆ ಕಂಡು ತುಸು ಸಮಾಧಾನವಾಯಿತು ಅವನಿಗೆ. ಅನೇಕರು ಈಗಾಗಲೆ ಅಲ್ಲಿ ಕಾಯುತ್ತಿದ್ದರೂ ತಾನು ಹೋದೊಡನೆ ತನ್ನನ್ನು ಗೌರವದಿಂದ, ಆದರಪೂರ್ವಕವಾಗಿ ಒಳಗೆ ಕರೆದುಕೊಂಡು ಹೋದರು. ಅನಂತನು ಗಾಬರಿ ಗಾಬರಿಯಿಂದ ಪ್ರತಿಯೊಂದು ಹಾಸಿಗೆಯ ಮೇಲಿನ ವ್ಯಕ್ತಿಯನ್ನು ಮುಖವೆತ್ತಿ ನೋಡದೆ ಹಾಗೇ ಸಾಗಿದನು. ಕೊನೆಗೆ ಒಂದು ಹಾಸಿಗೆಯ ಹತ್ತಿರ ಬಂದು ಅಧಿಕಾರಿ ತಡೆದನು, ಅನಂತನೂ ತಡೆದನು. ಅಧಿಕಾರಿಯು ಹಾಸಿಗೆಯ ಮೇಲೆ ಮುಖಕ್ಕೆ ಗಾಯಪಟ್ಟಿಗಳನ್ನು ಕಟ್ಟಿಕೊಂಡು ಮಲಗಿದ ವ್ಯಕ್ತಿಯ ಕಡೆ ನೋಡಿದನು. ಅನಂತನೂ ನೋಡಿದ್—

ಆದರೆ ಅನಂತನು ನೋಡಲೇ ಇಲ್ಲ, ನೋಡುವ ಅಗತ್ಯವೂ ಅವನಿಗಿರಲಿಲ್ಲ. ಆ ವ್ಯಕ್ತಿಯ ತುಟಿಯ ಮೇಲಿದ್ದ ನಗೆಯನ್ನು, ಆ ನಗೆಯಲ್ಲಡಗಿದ ಹೆಮ್ಮೆಯನ್ನು–ತಿರಸ್ಕಾರವನ್ನು ಕಂಡೊಡನೆ ಗೊತ್ತಾಯಿತು ಅನಂತನಿಗೆ. ಇವನು—ಮಾಧವ!....ಅಧಿಕಾರಿಯು ಅನಂತನ ಮಗ್ಗುಲಲ್ಲಿ ಒಂದು ಕುರ್ಚಿಯನ್ನಿಟ್ಟು ಹೋದನು.

ಅನಂತನು ಇಂತಹ ಪ್ರಸಂಗವನ್ನು ಎಂದೂ ಎದುರಿಸಿರಲಿಲ್ಲ. ಏನು ಮಾಡಬೇಕು, ಏನು ಮಾತನಾಡಬೇಕು ಎಂಬುದೆ ಹೊಳೆಯಲಿಲ್ಲ. "ಹೇಗಿದೆ ?" ಎಂದು ಕೇಳಿದರೆ ಇವನು ನಕ್ಕು ಅವಮಾನಗೊಳಿಸಬಹುದು. "ಪೆಟ್ಟು ಬಹಳ ತಾಕಿದೆಯೆ" ಎಂದರೆ "ಕಣ್ಣು ಕಾಣುವುದಿಲ್ಲವೆ" ಎನಬಹುದು. "ಇದನ್ನು ನೋಡಿ ನಿಜವಾಗಿಯೆ ವ್ಯಸನವಾಗಿದೆ" ಎಂದರೆ "ಠಕ್ಕ" ಎನಬಹುದು. ಆದರೆ, ತನಗೆ ನಿಜವಾಗಿಯೆ ವ್ಯಸನವಾಗಿದೆ, ಮಾಧವನ ಆ ಅವಸ್ಥೆಯನ್ನು ನೋಡಿದೊಡನೆ ಕರುಳು ಕಂಠದಲ್ಲಿ ಬಂದಂತಾಯಿತು; ಆದರೆ ಅದನ್ನು ಹೇಳಿದರೆ ನಂಬುವುದು ಕೂಡ ಕಷ್ಟ ಎಂಬ ವಿಚಾರದಿಂದ ಅವನಿಗೆ ಇನ್ನಿಷ್ಟು ವ್ಯಸನವಾಯಿತು. ಕೊನೆಗೆ "ಹಮ್ಮೂ ಎಲ್ಲಿ ?" ಎಂದು ಕೇಳಿದ.

ಮಾಧವನ ನಗೆ ಮಾಯವಾಯಿತು. "ಹಮ್ಮೂ?" ಪಾಪ! ಏನಾಗಿದೆ ದನಿಯ ಅವಸ್ಥೆ! "ಹಮ್ಮೂ ನನಗೆ ಭೆಟ್ಟಿಯಾಗಲಿಲ್ಲ." ಎಂದನು.

"ಅಲ್ಲ, ಹಮ್ಮೂನೆ ನನ್ನನ್ನು ಕರೆಯಿಸಲಿಲ್ಲವೆ ?"

ಮಾಧವನ ಮುಖದಲ್ಲಿ ಮತ್ತೆ ನಗೆ ಮೂಡಿತು. "ನಿನ್ನನ್ನು ಯಾರೂ ಕರೆಯಿಸಿಲ್ಲ–ಅಂದ್ರೆ–ಇಲ್ಲಿ ನನ್ನನ್ನು ತಂದಾಗ ನನಗೆ ಎಚ್ಚರವಿದ್ದಿಲ್ಲ. ಕಿಸೆಯಲ್ಲಿ ನಿನ್ನ ಹೆಸರಿನ ಕಾರ್ಡು, ನಿನ್ನ ವಿಳಾಸ ಇದ್ದಿತು. ನಿನ್ನೆ ಹಮ್ಮೂ ಕೊಟ್ಟಿದ್ದ. ಅದನ್ನು ನೋಡಿ ಆಸ್ಪತ್ರೆಯವರೆ ಕರೆದಿರಬಹುದು" ಎಂದ.

ಅನಂತನಿಗೆ ಅಸಮಾಧಾನವಾಯಿತು, ತುಸು ಅವಮಾನವೂ ಎನ್ನಿಸಿತು. ಅಂತೂ, ತಾನಾಗಿಯೆ ನನ್ನನ್ನು ಕರೆಯಿಸಿಲ್ಲ ಎಂಬ ಹೆಮ್ಮೆ ಇದೆ ಇವನಿಗೆ—ಎಂದುಕೊಂಡ.

"ಹೊಡೆದವರು ಯಾರು ? ಇಂಥಾ ಪರಿಯಿಂದ! ಅವರು ಸಿಕ್ಕರೆ ? ಫಿರ್ಯಾದ ಮಾಡಿದೆಯೆ ?" ಎಂದು ಸವಾಲು ಹಾಕಿದ ಮ್ಯಾಜಿಸ್ಟ್ರೇಟ ಅನಂತ.

ಮಾಧವನು ತಲೆ ಅಲ್ಲಾಡಿಸಿದನು. ಒಂದು ನಿಮಿಷ ಸುಮ್ಮನಿದ್ದನು. ಆ ಮೇಲೆ "ಹೊಡೆದವರು ಪೋಲೀಸರು. ಅವರನ್ನು ಹುಡುಕಿ ಫಿರ್ಯಾದ ಕೊಡುವುದು ಕಷ್ಟ" ಎಂದು ನಕ್ಕನು.

ಅನಂತನಿಗೆ ಸಂಶಯ ಬಂದಿತು. ಇರಬಹುದೆ? ಮಾಧವನು ಉಡಾಳ ನೇನೊ ನಿಜ. ಆದರೂ—ಇಷ್ಟು ಉಡಾಳನಾಗಿರಬಹುದೆ? ಯಾವ ಅತ್ಯಾಚಾರದಲ್ಲಿ ತೊಡಗಿದಾಗ ಪೋಲೀಸರು ಇವನನ್ನು ಹೊಡೆದಿರಬಹುದು? ಕೇಳುವುದೂ ಕಷ್ಟ. ಆಗಲಿ, ಕೇಳಿ ನೋಡೋಣ, ಎಂದ: "ಪೋಲೀಸರು ಹೊಡೆದಾಗ ನೀನು ಎಲ್ಲಿದ್ದಿ? ನಿನ್ನ ಪರವಾಗಿ ಸಾಕ್ಷಿ ಯಾರಾದರೂ—"

ಮಾಧವನು ಗಟ್ಟಿಯಾಗಿ ನಕ್ಕ. ರಕ್ತಮಯವಾದ ಪಟ್ಟಿಗಳನ್ನು ತಲೆಗೆ ಕಟ್ಟಿದೆ; ಮುಖ ಅಲ್ಲಲ್ಲಿ ಹಸರುಗಟ್ಟಿ ಉಬ್ಬಿದೆ; ಅದರಲ್ಲಿ, ನಗೆ. ಅನಂತನಿಗೆ ಭಯವಾಯಿತು. ಮಾಧವನು ಮಾತ್ರ ನಗುತ್ತಲೆ ಹೇಳಿದ:–"ನಾನು ಮೆರವಣಿಗೆಯಲ್ಲಿದ್ದೆ. ಮುವ್ವತ್ತು ಸಾವಿರ ಜನರು ಇದಕ್ಕೆ ಸಾಕ್ಷಿ."

೨೨

ಅನಂತ ರಾತ್ರಿ ಹೊಟೆಲಿಗೆ ಮರಳಿದ. ಆ ರಾತ್ರಿ ಊರಿಗೆ ಹೊರಡುವುದನ್ನು ಮುಂದೆ ಹಾಕಿದ, ತನ್ನ ಊಟ ಇಲ್ಲ ಎಂದು ಹೇಳಿ ಕೋಣೆಯೊಳಗೆ ಬಂದವನೆ ತಾನು ತಂದಿದ್ದ ಡೇಲಿ ಹೆರಲ್ಡ್ ಎಂಬ ಪತ್ರಿಕೆಯನ್ನು ಕಿಸೆಯೊಳಗಿಂದ ತೆಗೆದ. ಆ ಪತ್ರಿಕೆಯ ಹೆಸರನ್ನು ಕೂಡ ಕೇಳಿದ್ದಿಲ್ಲವಲ್ಲ ತಾನು? ಆದರೂ ಮೊದಲ ಪುಟದಲ್ಲಿ ಚಿತ್ರಸಹಿತವಾಗಿ, ಅಂದವಾದ ಅಚ್ಚಿನಲ್ಲಿ ಆ ಸಾಯಂಕಾಲ ಮುಂಬಯಿಯ ಒಂದು ಭಾಗದಲ್ಲಿ–ಲ್ಯಾಮಿಂಗ್ಟನ್ ರೋಡ್‌ದಲ್ಲಿ ಅಂತೆ–ನಡೆದ ಘಟನೆಯ ಸವಿಸ್ತರ ವೃತ್ತಾಂತವನ್ನೋದಿದ. ಮಾಧವನ ಬಾಯಿಂದಲೂ ಕೇಳಿಕೊಂಡಿದ್ದ. ವಿಶೇಷವಾಗಿ ಮಾಧವನ ದನಿಯಲ್ಲಿ, ಮುದ್ರೆಯಲ್ಲಿ ಅಂದಿನ ಘಟನೆಯ ಹಿನ್ನೆಲೆಯ ಸ್ಪಷ್ಟವಾದ ಕಲ್ಪನೆ ಅನಂತನಿಗೆ ಬಂದಿತ್ತು. ಶಕ್ಯವೆ? ಇಂತಹ ರೀತಿಯಲ್ಲಿ ಮುಂಬಯಿಯಂತಹ ಮುಖ್ಯ ಪಟ್ಟಣದ ದೊಡ್ಡ ಬೀದಿಯಲ್ಲಿ ಪೋಲೀಸರು ಜನರನ್ನು ನಡೆಸಿಕೊಳ್ಳುವುದು ಶಕ್ಯವೆ? ತನಗೆ ಎಲ್ಲ ದೃಷ್ಟಿಯಿಂದಲೂ ಮಾದರಿಯಾದ ಇಂಗ್ಲಂಡದಲ್ಲಿ ಮಾತ್ರ ಪೋಲೀಸರ ಈ ತರದ ಅಮಾನುಷ ವರ್ತನೆ ಖಂಡಿತವಾಗಿ ಶಕ್ಯವಿರಲಿಲ್ಲ ಎಂದುಕೊಂಡ ಅನಂತ. ಆದರೆ ಇಲ್ಲಿಯ ನಾಗರಿಕರು,

ನಮ್ಮವರು—ಇವರಿಗಾದ ಇಂತಹ ಘಟನೆ ಅನಿವಾರ್ಯವಾಗುವುದೆ? ಅನಂತ ಮತ್ತೊಮ್ಮೆ ಪತ್ರಿಕೆಯಲ್ಲಿಯ ವಿವರಗಳನ್ನು ನೋಡಿದ. ಇಪ್ಪ-ತ್ತೈದು ಮುವ್ವತ್ತು ಸಾವಿರ ಜನರು! ಬೀದಿಯಲ್ಲಿ ಇರುವೆಗೆ ಜಾಗೆ ಇಲ್ಲದಂತೆ ದಟ್ಟ ಸಂದಣಿಯಲ್ಲಿ ನಡೆದಿದ್ದಾರೆ; ಅಲ್ಲಲ್ಲಿ ಬದಿಯ ಚಿಕ್ಕ ಬೀದಿಗಳು ಕೂಡ ಮನುಷ್ಯರಾಶಿಗಳಿಂದ ತುಂಬಿಕೊಂಡಂತಿವೆ. ಅರ್ಧ ಮೈಲು ಉದ್ದವಾದ ಮೆರವಣಿಗೆ. ಅರವತ್ತುನಾಲ್ಕು ದಿನದ ಉಪವಾಸಕ್ಕಾಗಿ ಆ ಜತೀನ ದಾಸನೆಂಬವನು ಮೃತನಾಗಿದ್ದಾನಂತೆ. ಅವನ ಜಯಘೋಷ, ಅದರ ಪ್ರತಿಧ್ವನಿ–ಇವುಗಳಿಂದ ಬೀದಿ ಗದಗದ ನಡುಗುವಂತಿದೆ. ಆದರೆ ಪೋಲೀಸರೆಲ್ಲಿಂದ ಬಂದರು?—ಅನಂತ ಮತ್ತೆ ಓದಿದ....ಮೆರವಣಿಗೆಯನ್ನು ತಡೆದರಂತೆ—ಶಾಂತತಾಭಂಗವಾಗಬಹುದೆಂದು ಹೇಳಿದರಂತೆ–! ಹುಚ್ಚು! ಮುವ್ವತ್ತು ಸಾವಿರ ಜನರು ಭಾವನಾಪರವಶರಾಗಿ ಕೂಡಿದಾಗ ಇದೆಲ್ಲ ವ್ಯರ್ಥ, ಬರಿಯ ಕಾಯಿದೆಯ ನಾಟಕ....ಅನಂತನು ತಾನೂ ಮ್ಯಾಜಿಸ್ಟ್ರೇಟನಾಗಿದ್ದಾನೆ. ಇಂತಹ ಅನುಭವ ತನಗಿದೆ. ಪೋಲೀಸರು ಯಾರಿಗೆ ಹೇಳುವುದು? ಯಾರು ಈ ಮೆರವಣಿಗೆಯ ಜವಾಬ್ದಾರಿಯನ್ನು ವಹಿಸುವರು? ತನ್ನ ಹಿಂದೆ ನಿಂತವರು ಯಾರು ಎಂದು ನೋಡಬೇಕೆಂದರೆ–ಮುಖ ತಿರುಗಿಸಲು ಜಾಗೆ ಇಲ್ಲ–ಅಂತಹ ದಟ್ಟ ಸಂದಣಿ....ಮಾಧವನು ಹೇಳಿದನಲ್ಲ? ಹಮ್ಮೊನ ಸಲುವಾಗಿ ದಾರಿ ಕಾಯ್ದು ತಡವಾದ್ದರಿಂದ ತನಗೆ ಮೆರವಣಿಗೆಯ ಮುಂಭಾಗದಲ್ಲಿ ಸೇರಲು ಶಕ್ಯವಾಗಲಿಲ್ಲ, ತಾನು ಮಧ್ಯದಲ್ಲಿ ಸೇರಿಕೊಂಡ, ಕೆಳಗಿನ ನೆಲ ಕೂಡ ಕಾಣಿಸುತ್ತಿರಲಿಲ್ಲ ಎಂದು? ಪಾಪ! ಪೋಲೀಸರು ಆ ರೀತಿ ಲಾಠಿಯಿಂದ ಹೊಡೆಯುವರೆಂದು ಯಾರಿಗೂ ಕಲ್ಪನೆ ಕೂಡ ಇರಲಿಕ್ಕಿಲ್ಲ? ಜನ ಹೌಹಾರಿದಂತಾಗಿರಬಹುದು! ಲಾಠಿಯನ್ನು ಬೀಸುತ್ತ ಬಾಳೆಯ ತೋಟದಲ್ಲಿ ಮದ್ದಾನೆ ಹೊಕ್ಕಂತೆ ಪೋಲೀಸರು ಹೊಕ್ಕಾಗ ಜನರಿಗಾದ ಅವಸ್ಥೆಯನ್ನು ಬಣ್ಣಿಸುವಾಗ ಮಾಧವನ ದನಿಯಲ್ಲಿ ಅತ್ಯಂತ ದ್ವೇಷ, ಆಹ್ವಾನ ಇದ್ದುವೆಂಬುದು ಅನಂತನ ಲಕ್ಷ್ಯಕ್ಕೆ ಬಂದಿತ್ತು. ಯಾರ ತಪ್ಪು? ಮಾಧವನ ತಲೆಗೆ, ಭುಜಕ್ಕೆ, ಕೆನ್ನೆಗೆ ಆದ ಅಮಾನುಷ ಗಾಯಗಳನ್ನು ನೋಡಿದರೆ—ಅನಂತನಿಗೆ ನೆನೆಯುವುದಾಗಲಿಲ್ಲ.

. . . . .

ಹದಿನೆಂಟು ವರ್ಷಗಳ ನಂತರ ಇಂದು ನೆನೆದುಕೊಂಡಾಗಲೂ ಅನಂತ ಕಣ್ಣು ಮುಚ್ಚಿದ. ಅವನ ಮೈ ಗದಗದ ನಡುಗಿತು. ಕುರ್ಚಿಯಿಂದೆದ್ದ. ಉಸುರ್ಗರೆದ. ಮೇಜಿಗೆ ನಡೆದು ಮತ್ತೊಂದು ಸಿಗರೇಟನ್ನು ಹಚ್ಚಿದ. ಕೈಗಡಿಯಾರವನ್ನು ನೋಡಿದ. ಐದು ಹೊಡೆಯಲು ಸ್ವಲ್ಪೇ ಅವಕಾಶ ಉಳಿದಿದೆ. ಹೊರಡೋಣ, ಬಟ್ಟೆಯನ್ನು ಹಾಕಿಕೊಳ್ಳೋಣ ಎಂದ. ಮುಖವನ್ನಾದರೂ ಮುಂಚೆ ತೊಳೆದುಕೊಳ್ಳೋಣ ಎಂಬ ವಿಚಾರದಿಂದ ಮತ್ತೆ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡ. ಗಾಬರಿಯಾದ. ಅಂದಿನ ಆ ಘಟನೆಯ ಸ್ಮರಣೆಯಿಂದ ಈಗ ಕೂಡ ತನ್ನ ಮುಖ ಕಳೆಗೆಟ್ಟಿದೆ ! ಹಾಳು ! ಈ ಮಾಧವನು ತನಗೂ ಸುಖ ತಂದುಕೊಳ್ಳಲಿಲ್ಲ, ಎರಡನೆಯವರಿಗೂ ಸುಖವಿಲ್ಲ ಇವನಿಗಾಗಿ....ಇಂದು ಅವನ ಕಡೆ ಹೋಗಬೇಕಾಗಿದೆ ಎಂಬ ನಿಮಿತ್ತಕ್ಕಾಗಿ ಒಂದೇಸವನೆ ಸ್ಮರಣೆಯ ಚಲಚ್ಚಿತ್ರ ನಡೆದಿದೆ. ಒಮ್ಮೆಲೆ ಅನಂತ ಹಣೆಗೆ ಗಂಟು ಏರಿಸಿ ನಿಂತುಕೊಂಡ. ಓಹೊ ! ಈಗ ಹೊಳೆಯಿತು ಅವನಿಗೆ ! ಕಾಲೇಜದ ಅಸೂಯೆಯ, ಸ್ಪರ್ಧೆಯ ದಿನಗಳಿಂದ ಮಾಧವ ತನ್ನ ಅಂತರಂಗ ( Sub-conscious) ದಲ್ಲಿ ಹುದುಗಿಕೊಂಡೇ ಕೂತಿದ್ದಾನೆ! ಇಷ್ಟೇಕೆ ? ತನ್ನ ಜೀವನದಲ್ಲಿ ಕೂಡ ಮಾಧವನು ಆಗಾಗ ಕೈಹಾಕಿದ್ದಾನೆ.... ಅನಂತನು ಸಿಗರೇಟನ್ನು ಬಿಸುಡಿ ಬದಿಯಲ್ಲಿಂಯ ಬಚ್ಚಲಕ್ಕೆ ಹೋದನು, ಮುಖ ತೊಳೆದುಕೊಂಡು ಬಂದನು, ಕನ್ನಡಿಯ ಇದಿರು ನಿಂತು ಬಟ್ಟೆಯನ್ನು ಹಾಕುವುದರಲ್ಲಿ ತೊಡಗಿದನು....ನಿಜ, ಮಾಧವನು ತನ್ನ ಜೀವನದಲ್ಲಿ ಆಗಾಗ ಕೈಹಾಕಿದ್ದಾನೆ, ಒಂದು ಪ್ರಸಂಗದಿಂದಂತೂ ತನ್ನ ಭವಿತವ್ಯವನ್ನೆ ನಿರ್ಣಯಿಸಿದ್ದಾನೆ, ಬದಲಾಯಿಸಿದ್ದಾನೆ.

. . . . .

ಅಂದು ಆಸ್ಪತ್ರಿಯಲ್ಲಿ ತಾನು ಕಂಡ ಮಾಧವನ ಮುಖದೃಶ್ಯ ಅನಂತನಿಗೆ ಸಹಸಾ ಮರೆಯಲಿಲ್ಲ. ಆಗಾಗ ಕಣ್ಣೆದುರು ಕಟ್ಟನಿಂತು ಅವನನ್ನು ಬಾಧಿಸತೊಡಗಿತು. ನಿದ್ರೆ ಮಾಡುವಾಗ ಕನಸಿನಲ್ಲಿ ಎದುರು ನಿಲ್ಲುತ್ತಿತ್ತು. ರಕ್ತಮಯವಾದ ಬಟ್ಟೆ, ವಿಕಾರವಾದ ಮುಖ, ಬಾತು ಉಬ್ಬಿದರೂ ತಿರಸ್ಕಾರದ ನಗೆಯನ್ನು ಸೂಸುವ ತುಟಿ—ಈ ಚಿತ್ರವು ಅನಂತನನ್ನು ಪ್ರಾಚೀನ ಕರ್ಮದಂತೆ ಬೆನ್ನಟ್ಟಿತು. ಮತ್ತಾರಿಗೂ ಹೇಳುವಂತಹ ಸಂಗತಿಯಾಗಿರಲಿಲ್ಲ.

ಅದಕಾಗಿ ಅನಂತನ ಒಳಬೇನೆ ಹೆಚ್ಚಿತು. ನಿರುಪಾಯನಾಗಿ ವಿಸ್ಕಿ ಪೇಯಕ್ಕೆ ಶರಣು ಹೋದ. ಅದರಿಂದಲೂ ಸಮಾಧಾನ ದೊರೆಯಲಿಲ್ಲ. ಕುಡಿಯುವಾಗ ಮರೆತರೂ, ಕುಡಿದು ಘೋರ ನಿದ್ರಾವಸ್ಥೆಯಲ್ಲಿದ್ದಾಗ ಮಾಧವನ ಮುಖ ದೃಶ್ಯವು ಇನ್ನಿಷ್ಟು ಘೋರವಾಗಿ ಕಾಣತೊಡಗಿತು. ಒಂದೆರಡು ಸಲ ಬೆಳಗಿನಲ್ಲಿ ಸೇವಕರು ತನ್ನನ್ನು ಕುತೂಹಲ ದೃಷ್ಟಿಯಿಂದ ನೋಡುವಂತೆ ಕಂಡು ಬಂದಿತ್ತು. ರಾತ್ರಿ ತಾನು ನಿದ್ರೆಯಲ್ಲಿ ಎಚ್ಚರಾಗಿ, ಕೂಗಿ, ಚೀರಿ ಸೇವಕರಿಗೆ ಸಂಶಯ ಹುಟ್ಟುವಂತೆ ಮಾಡಿರಲಿಕ್ಕಿಲ್ಲವಷ್ಟೆ ?....ಮುಂದೆ ಒಂದು ವರ್ಷದಲ್ಲಿ ಪರಿಸ್ಥಿತಿಯು ಅನಂತನನ್ನು ಪೂರ್ತಿಯಾಗಿ ಹಣ್ಣು ಮಾಡಿತು.... ದೇಶದ ತುಂಬ ಚಳವಳವೆದ್ದಿತು. ಎಲ್ಲಿ ನೋಡಿದಲ್ಲಿ ಸೆರೆ, ಲಾಠಿ, ಗುಂಡು—ಇವೇ ದೃಶ್ಯಗಳು ಘಟಿಸಿದುವು. ಅನಂತನಿಗೂ ಜವಾಬ್ದಾರಿಯಿದೆ. ಜಿಲ್ಲಾಧಿಕಾರಿಯಾದುದಕ್ಕೆ ಶಾಂತತೆಯನ್ನು ಕಾಯ್ದುಕೊಳ್ಳಬೇಕಾಗಿದೆ. ಈ ಹಾಳು ಜನರು ಸಭೆ–ಮೆರವಣಿಗೆಗಳಿಂದಲೆ ಗಲಾಟೆಯನ್ನೆಬ್ಬಿಸಬೇಕೆ? ಸ್ಥಾನಿಕ ಮುಂದಾಳುಗಳನ್ನು ಸೆರೆ ಹಿಡಿದರೆ ಮುಗಿಯಲಿಲ್ಲ....ಇನ್ನೂ ಜನ ಹಾಗೇ ನುಗ್ಗುತ್ತಿತ್ತು ಸಭೆ–ಮೆರವಣಿಗೆಗಳಲ್ಲಿ. ಈ ಸಲ ಹೆಂಗಸರದೊಂದು ಉಪದ್ವ್ಯಾಪ! ಸಭೆಗಳಲ್ಲಿ, ಮೆರವಣಿಗೆಗಳಲ್ಲಿ ಹೆಂಗಸರೇ ಮುಂದೆ! ನಿಜವಾಗಿ ನೋಡಿದರೆ ಶಾಂತತಾಭಂಗ ಆದೀತೊ ಇಲ್ಲವೊ ಎಂಬುದರ ನಿರ್ಣಯದ ಅಧಿಕಾರ ಜಿಲ್ಲಾಧಿಕಾರಿಯಾದ ತನಗೆ. ಕಳೆದ ವರ್ಷದ ಮಾಧವನ ಮುಖ ದೃಶ್ಯದಿಂದ ಬೆದರಿ ಬೆಂಡಾದ ಅನಂತನು ಶಾಂತತಾಭಂಗವಾಗುವುದಿಲ್ಲ ಎಂದು ಹಟ ಹಿಡಿದು ಲಾಠಿಯ ಮತ್ತು ಗುಂಡಿನ ಪ್ರಸಂಗಗಳನ್ನು ತಪ್ಪಿಸಿಕೊಳ್ಳಬೇಕೆಂದನು. ಸಾಧಿಸಲಿಲ್ಲ. ಮೇಲಿನಿಂದ ಎಚ್ಚರಿಕೆ ಬಂದಿತು. ಶಾಂತತಾಭಂಗವಾಗುವುದು ಮುಖ್ಯವಲ್ಲ, ಜನರನ್ನು ಹೆದರಿಸಿ ಹಣ್ಣು ಮಾಡುವುದು ಮುಖ್ಯ, ಅದಕಾಗಿ ಉಗ್ರೋಪಾಯಗಳನ್ನು ಮುಂಜಾಗ್ರತೆಯಾಗಿಯೆ ಕೈಕೊಳ್ಳಬೇಕೆಂದು ಮೇಲಿನಿಂದ ಗುಪ್ತ ಆಜ್ಞೆಗಳು ಬರತೊಡಗಿದುವು. ಅನಂತನು ಕಂಗೆಟ್ಟನು. ಕುಡಿಯುವುದು ಹೆಚ್ಚಿತು. ಆ ಭರದಲ್ಲಿ ಮೇಲಿನ ಆಜ್ಞೆಯನ್ನು ಕಡೆಗಣಿಸುವ ತಾತ್ಕಾಲಿಕ ಧೈರ್ಯ ಅವನಿಗೆ ಬಂದಿತು. ಆದರೆ ಸರಕಾರವು ಈ ಪ್ರಸಂಗ ಬರಬಹುದೆಂದು ಮುಂಚಿತವಾಗಿಯೆ ತಿಳಿದುಕೊಂಡಂತೆ ತನ್ನ ಜಿಲ್ಲೆಗೆ ಯುರೋಪಿಯನ್ ಪೋಲೀಸ ಅಧಿಕಾರಿಯನ್ನು

ನೇಮಕ ಮಾಡಿ ಕಳುಹಿಸಿತು....ಮುಗಿಯಿತು, ಅಂದಿನಿಂದ ಅನಂತನ ಕತೆಯೆ ಮುಗಿಯಿತು. ಅವನ ಜಿಲ್ಲೆಯಲ್ಲಿ ಪೋಲೀಸ ಹಿಂಸೆಯ ಅಕಾಂಡತಾಂಡವ ನಡೆಯಿತು. ಜನರಿಗೇನು? ಜಿಲ್ಲೆಯಲ್ಲಿ ನಡೆದುದರ ಹೊಣೆ ಜಿಲ್ಲಾಧಿಕಾರಿಯದು. ಆದ್ದರಿಂದ ಈ ಅಕಾರಣಹಿಂಸೆಗೆ ಅನಂತನೆ ಕಾರಣ ಎಂದು ಜನತೆ ಬೊಬ್ಬೆ ಇಟ್ಟಿತು....ಅನಂತನಿಗೆ ಅತ್ಯಂತ ಅಸಹ್ಯವೆನ್ನಿಸಿತು....ಪ್ರಕೃತಿಯ ಅಸ್ವಾಸ್ಥ್ಯದ ನೆವದಿಂದ ರಜೆಯ ಮೇಲೆ ಹೋಗಲು ಅಪ್ಪಣೆಯನ್ನು ಕೇಳಿಕೊಂಡನು....ಇವನು ಕುಡುಕನೆಂದೂ ಜನರು ಗಲಾಟೆಯನ್ನೆಬ್ಬಿಸಿದರು....ಇಂತಹ ಅಮಾನುಷ ಮನೋವೃತ್ತಿಯ ದುರ್ವ್ಯಸನಿಯನ್ನು ವರ್ಗಾಯಿಸಬೇಕೆಂದು ಮಧ್ಯಸ್ಥರು ಕೂಡ ಕೂಗನ್ನೆಬ್ಬಿಸಿದರು. ಅನಂತನು ರಜೆಗಾಗಿ ಸಾರಿಸಾರಿ ಬೇಡಿಕೊಂಡನು....ಕೊನೆಗೆ ರಜೆ ಸಿಗಲಿಲ್ಲ, ಮತ್ತೊಂದು ಜಿಲ್ಲೆಗೆ ಆ್ಯಡಿಶನಲ್ ಮ್ಯಾಜಿಸ್ಟ್ರೇಟ ಎಂದು ವರ್ಗವಾಯಿತು.

. . . . . .

ವಿಚಾರದ ಭರದಲ್ಲಿಯೆ ತಾನು ಬಟ್ಟೆ ಹಾಕಿಕೊಳ್ಳುವುದು ಮುಗಿದಿದೆ ಎಂಬುದು ಅನಂತನ ಲಕ್ಷ್ಯಕ್ಕೆ ಬಂದಿತು. ಈಗ ತಾನು ಸ್ಮರಿಸಿಕೊಂಡ ಅನುಭವ ಇಂದು ಕನಸಿನಂತೆ ಕಾಣುತ್ತಿದೆಯಲ್ಲ? ೧೯೩೦–೩೧ರಲ್ಲಿ ದೂಷಿತನಾಗಿ ಕೆಳಗೆ ನೂಕಲ್ಪಟ್ಟ ಅನಂತನು ಇಂದು—೧೯೪೭ರಲ್ಲಿ—ಪ್ರಜಾಮಂತ್ರಿಮಂಡಳದ ಸನ್ಮಾನಿತ ಅಧಿಕಾರಿಯಾಗಿದ್ದಾನೆ! ಇದಕಾಗಿಯೆ ಅನಂತನು ಹಮ್ಮೂನಿಗೆ ಚಿರಋಣಿಯಾಗಿದ್ದನು. ಹಮ್ಮೂನು ಸಹಾಯ ಮಾಡಿದ್ದಿಲ್ಲವೆಂದರೆ ಹಿಂದಿನ ಕತೆಗಾಗಿ ತನ್ನ ನೋಕರಿಯೆ ಮುಗಿಯಬಹುದಾಗಿತ್ತು ಇಂದು. ....ಹಹ!....ಹಮ್ಮೂನಾದರೂ ಎಂತಹ ಬುದ್ಧಿವಂತ—! ಅಥವಾ—ತಾನು ಮೇಲಿಂದ ಮೇಲೆ ಹೇಳುವಂತೆ ಹಮ್ಮೂ ನಿಜವಾಗಿ ಬದ್ಮಾಷನೊ!.... ಅಲ್ಲ! ಆ ದಿನ ಅವನು ತನ್ನ ಮನೆಯಲ್ಲಿ ಸುಖದಿಂದ ಉಂಡುಟ್ಟು ಕ್ರಾಂತಿಕಾರನೆನ್ನಿಸಿಕೊಂಡ!....೧೯೪೨ರ ಬಂಡಾಯ! ....ಅಗಸ್ಟ ೮ ಮತ್ತು ೯, ಶನಿವಾರ ಮತ್ತು ರವಿವಾರ....ಅರ್ಥಾತ್, ಹಮ್ಮೂ ಪುಣೆಗೆ ಬರತಕ್ಕವನೆ, ಜೂಜಾಟಕ್ಕಾಗಿ. ಅನಂತನೂ ಪುಣೆಗೆ ಬಂದಿದ್ದ. ಜೂಜಾಟದ 'ರಣಾಂಗಣ'ದ ಮೇಲೆ ಹಮ್ಮೂನ ಭೆಟ್ಟಿಯಾಯಿತು.

"ಯಾಕೊ? ಇಂದು 'ರಣಾಂಗಣ' ಎಂಬ ಹೊಸ ಶಬ್ದ ತೆಗೆದೆ?" ಎಂದಿದ್ದ ಅನಂತ.

" ನಾನು ಬಂದದ್ದು ರಣಾಂಗಣಕ್ಕೆ. ಎ. ಆಯ್. ಸಿ. ಸಿ. ಸಭೆಗಾಗಿ ಬಾದಿದ್ದೇನೆ, ಅಲ್ಲಿ ರಣಕಹಳೆ ಊದುವುದಿದೆ. "

" ಎ. ಆಯ್. ಸಿ. ಸಿ. ಸಭೆ ಮುಂಬಯಿಯಲ್ಲಿ, ನೀನು ಪುಣೆಯಲ್ಲಿ!" ಅನಂತ ನಕ್ಕನು.

" ಪುಣೆ ಎಂದರೇನು ? ಮುಂಬಯಿಯ ದಾರಿಯಲ್ಲಿಯೆ ಇದೆ. "

ಹಮ್ಮೂನ ಉತ್ತರಕ್ಕೆ ಇಬ್ಬರೂ ಗೆಳೆಯರು ನಕ್ಕರು. ದಿನದ ಕಾರ್ಯಕ್ರಮ ಮುಗಿದ ಮೇಲೆ, ರೇಸ ಕೋರ್ಸಿನಿಂದ ಇಬ್ಬರೂ ಮರಳಿದರು. ದಾರಿಯಲ್ಲಿ ಹಮ್ಮೂನೆ ಮಾತನ್ನು ಪ್ರಾರಂಭಿಸಿದ.

" ಅನಂತಾ, ಇಷ್ಟು ಸಲ ನೀನು ಆಮಂತ್ರಣ ಕೊಟ್ಟೆ ನನಗೆ. ಇಂದು–ಯಾಕೊ ?—ನಿನ್ನ ಆಮಂತ್ರಣ ಸ್ವೀಕರಿಸಬೇಕು ಎನ್ನಿಸಹತ್ತಿದೆ. ನನಗೂ ಸ್ವಲ್ಪ ವಿಶ್ರಾಂತಿ ಬೇಕಾಗಿದೆ. "

" ಹಮ್ಮೂ ! ಹಮ್ಮೂ ! " ಅನಂತನಿಗೆ ಹಿಡಿಸಲಾರದಷ್ಟು ಆನಂದವಾಯಿತು. " ನಿಜವಾಗಿಯೆ ಬರುವೆಯಾ ? " ಅನೇಕ ಅನುಭವಗಳಿಗಾಗಿ ಒಬ್ಬೊಂಟಿಗನಾದ ಅನಂತ ಬೇಸತ್ತಿದ್ದ. ಇದಲ್ಲದೆ ತನ್ನ ಗೆಳೆಯನಿಗೆ ತನ್ನ ಮನೆಯ ವೈಭವ, ತನ್ನ ಅಧಿಕಾರದ ವೈಭವ ಒಮ್ಮೆಯಾದರೂ ತೋರಿಸಬೇಕೆಂಬ ಉಬ್ಬು. ಗೆಳೆಯನನ್ನು ಬಲವಾಗಿ ಭುಜಗಳಿಂದ ತಟ್ಟಿ, "ಹಮ್ಮೂ! ನಿಜವಾಗಿಯೆ ಬರುವೆಯಾ ? ಈ ರಾತ್ರಿಯೆ ಹೊರಡೋಣ" ಎಂದನು.

ಅಂತೂ, ಆ ರಾತ್ರಿ ಹಮ್ಮೂನು ಅನಂತನೊಡನೆ ಹೊರಟು ಮರುದಿನದಿಂದ ಆಯ್. ಸಿ. ಎಸ್. ಅಧಿಕಾರಿಯ ಅಥಿತಿಯಾಗಿ ಉಳಿದುಕೊಂಡನು.

. . . .

ದೊಡ್ಡ ಗಡಿಯಾರದಲ್ಲಿ ಐದರ ಟಣ್‌ಕಾರವಾಯಿತು. ಅನಂತನು ಹೊರಹೊರಡಲು ಸಜ್ಜಾದನು....ಯಾಕೊ, ಒಮ್ಮೆಲೆ ನಗೆ ಬಂದಿತು. ಹಮ್ಮೂ ! ಹಹ ! ತನ್ನ ಅತಿಥಿಯಾಗಿದ್ದಾಗ ಎಂತಹ ಮೋಜುಗಾರನಾಗಿದ್ದ ಹಮ್ಮೂ ! ಆಯ್‌ಸಿಎಸ್ ಅನಂತನಿಗಿಂತ ಹಳ್ಳಿಯ ಹನುಮಂತಗೌಡ ಭೇಷ್—ಎಂದದ್ದನ್ನು ೧೯೪೨ರ ಅಗಷ್ಟದ ನಂತರ ಹಮ್ಮೂನು ಸಿದ್ಧಮಾಡಿಕೊಟ್ಟ. ಹಮ್ಮೂನನ್ನು ಕೂಡಿಕೊಂಡು ತನ್ನ ಮನೆಗೆ ಮುಟ್ಟುವುದೊಂದೆ ತಡ ಇಡಿಯ ದೇಶದ ತುಂಬ ಗಲಭೆ ಎದ್ದಿತು. ಎಲ್ಲ ಮುಂದಾಳುಗಳು ಬಂಧಿಸಲ್ಪಟ್ಟು ಎಲ್ಲಿಯೊ ಅಜ್ಞಾತವಾಸಕ್ಕೆ ಕಳುಹಿಸಲ್ಪಟ್ಟಿದ್ದರು.

ಕೆಲವು ಸ್ಥಾನಿಕ ಮುಂದಾಳುಗಳು ಯಾವುದೊ ಒಂದು ಕಾರಣಕ್ಕಾಗಿ, ಒಂದು ಕಾರ್ಯಕ್ರಮಕ್ಕಾಗಿ ತಪ್ಪಿಸಿಕೊಂಡಿದ್ದಾರೆಂಬುದು ೨-೩ ದಿನಗಳಲ್ಲಿ ಸ್ಪಷ್ಟವಾಗಿದ್ದಿತು. ಹಮ್ಮೂನು ಆ ಸಂಧಿಯನ್ನು ಸಾಧಿಸಿಕೊಂಡ! ಆಯ್ ಸಿಎಸ್ ಅನಂತನಲ್ಲಿಯೆ ತಾನು 'ಫರಾರಿ'ಯಾದ ಮುಂದಾಳು ಎಂದು ಖ್ಯಾತಿಯನ್ನು ಪಡೆದ. ಹಹಹ! ತನ್ನ ಮನೆಯಲ್ಲಿಯೆ ಇರುವಾಗ ಅವನನ್ನು ಹಿಡಿಯುವರಾರು? ಯಾರ ಪರಿಚಯವೂ ಇದ್ದಿಲ್ಲ. 'ಸಾಹೇಬ'ರ ಆಪ್ತ ಎಂದು ಹಮ್ಮೂ ಸಾಧಿಸಿಕೊಂಡ....ಆಗ ತಿಳಿಯಿತು ಅನಂತನಿಗೆ ಹಮ್ಮೂನ ವ್ಯವಹಾರ ಚಾತುರ್ಯ. ತನಗೆ ಯಾವಾಗಲೂ ರೇಸಕೋರ್ಸ-ಹೊಟೆಲುಗಳಲ್ಲಿ ಭೆಟ್ಟಿಯಾದರೂ ಹಮ್ಮೂ ತನ್ನ ಕಡೆ—ಕರ್ನಾಟಕದಲ್ಲಿ—ಕ್ರಮೇಣ ಸಾರ್ವಜನಿಕ ಮುಂದಾಳು ಎನ್ನಿಸಿಕೊಂಡಿದ್ದ. ಆ ಕತೆಯನ್ನು ಹಮ್ಮೂನೆ ಸವಿಯಾಗಿ, ಸವಿಸ್ತರವಾಗಿ ಹೇಳಿದ್ದಿಲ್ಲವೆಂದರೆ ಅನಂತನಿಗೆ ವಿಶ್ವಾಸವೆ ಹುಟ್ಟುತ್ತಿರಲಿಲ್ಲ....ಯಾವುದಕ್ಕೂ ಹಣ ಮುಖ್ಯ, ಅದು ಸಾಕಷ್ಟಿತ್ತು ಹಮ್ಮೂನಿಗೆ; ಇತ್ತ ಮಾಧವನಂತಹರ ಗೆಳೆತನ; ಆಗಾಗ ಸಭೆಗಳಿಗೆ ಅಧ್ಯಕ್ಷನಾಗುವುದು. ಅಂತೂ ಹಮ್ಮೂ ಮುಂದ್ಮುಂದಾಗಿದ್ದ. ಇದಲ್ಲದೆ ಮೇಲಿಂದ ಮೇಲೆ ಪುಣೆ-ಮುಂಬಯಿಗಳಿಗೆ ಹೋಗಿ ಬರುವುದು. ಜನರಿಗೇನು ತಿಳಿಯುವುದು ಇವನು ಯಾಕೆ ಹೋಗುವನೆಂಬುದು? ಅಂತೂ, ಹಮ್ಮೂ ದೊಡ್ಡ ಮನುಷ್ಯನಾಗಿದ್ದನಂತೆ. ಮಿಕ್ಕವರ ವೆಚ್ಚವನ್ನು ವಹಿಸುತ್ತ ಕೊನೆಗೆ ಎ. ಆಯ್. ಸಿ. ಸಿ. ಗೆ ತನ್ನದೇ ಚುನಾವಣೆಯಾಗುವಂತೆ ನೋಡಿಕೊಂಡಿದ್ದನಂತೆ. ಅಲ್ಲಲ್ಲಿಯ ಅಧಿವೇಶನಗಳಿಗೆ ತಮ್ಮ ವೆಚ್ಚದಿಂದ ಹೋಗಿಬರುವ ಕೆಲವು ಪ್ರತಿನಿಧಿಗಳಾದರೂ ಬೇಕಲ್ಲ? ಅಂತೂ, ಕಾಂಗ್ರೆಸದಲ್ಲಿ ಸಾಕ್ಷಾತ್ತಾಗಿ ಸೇರಿದ್ದ ಹಮ್ಮೂ. ಈಗ ಇಂತಹ ಸಂದರ್ಭ! ಆಯಿತು. ಹಮ್ಮೂನು ತಾನು ಕಣ್ಮರೆಯಾಗಿ ಕೆಲಸ ಮಾಡುವ ವೀರ ಮುಂದಾಳು ಎಂದು ಸ್ವಲ್ಪೇ ದಿನಗಳಲ್ಲಿ ಸಾಧಿಸಿಕೊಂಡ.

ಹೋಗಲಿ. ಇನ್ನೊಬ್ಬನ ಗೊಡವೆ ತನಗೇಕೆ—ಎಂದುಕೊಂಡ ಅನಂತ. ಹಮ್ಮೂನಿಂದ ತನಗೆ ಲಾಭವಾದದ್ದು ನಿಜ. ಒಂದೆರಡು ತಿಂಗಳು ಹಮ್ಮೂ ತನ್ನಲ್ಲಿ ಉಳಿದಾಗ ತನ್ನ ಹಿಂದಿನ ಅನುಭವವನ್ನೆಲ್ಲ ಅನಂತ ಅವನಿಗೆ ಹೇಳಿದ್ದ; ಚಳವಳಗಳಿಗೆ ತನ್ನ ಸಹಾನುಭೂತಿ ಇದ್ದುದರಿಂದ ಬ್ರಿಟಿಶ ಅಧಿಕಾರಿಗಳು ತನ್ನನ್ನು ಹೇಗೆ ಹಿಂದೆ ನೂಕಿದ್ದಾರೆ ಎಂಬ ಕತೆಯನ್ನೂ ರಚಿಸಿ ಹೇಳಿದ.

ಆಗಾಗ ಹಮ್ಮೂನಿಗೆ ಒಟ್ಟು ಐದಾರು ನೂರು ರುಪಾಯಿಗಳನ್ನೂ ಕೊಟ್ಟಿದ್ದ —ಚಳವಳಕ್ಕೆ ಸಹಾಯ ಎಂದು. ಅಂತೂ, ಚಳವಳ ಮುಗಿದು ಕಾಂಗ್ರೆಸು ಚುನಾವಣೆಯಲ್ಲಿ ಭಾಗ ವಹಿಸುವಷ್ಟರಲ್ಲಿ ಹಮ್ಮೂ ಮತ್ತು ತಾನು ಪರಸ್ಪರ ಉಪಕಾರಬದ್ಧರಾಗಿದ್ದರು.

" ಅನಂತಾ, ಇನ್ನು ನಾನೇ ಅರಸ, ನೀನು ಮಂತ್ರಿ " ಎಂದಿದ್ದ ಒಂದು ದಿನ ಹಮ್ಮೂ.

" ಅಂದರೆ ? ನಡುವೆ ಮುಖ್ಯ ಮಂತ್ರಿ ಯಾರು ? ಹಾಂ— ನಿನ್ನ ಗೆಳೆಯ ಮಾಧವ ! ಅಹುದಲ್ಲೊ ? " ತಾನು ನಕ್ಕಿದ್ದ.

" ಮಾಧವ ? ಅನಂತಾ, ಮಾಧವನ ಜಾತಿಯ ದೇಶಭಕ್ತರ ಯುಗ ಮುಗಿಯಿತು. "

ಅನಂತ ನಗೆಯಿಂದ ಕೇಳಿದ, " ಈಗ ಯಾವ ಯುಗ ಪ್ರಾರಂಭ ವಾಗುವುದು ? "

ಹಮ್ಮೂನು ಉಪನ್ಯಾಸದ ಠೀವಿಯಲ್ಲಿಯೆ ಪ್ರಾರಂಭಿಸಿದ. "ಅನಂತಾ, ಸತ್ಯ–ಅಹಿಂಸೆ–ಸ್ವಾರ್ಥತ್ಯಾಗ–ರಾಮರಾಜ್ಯ ಇವೆಲ್ಲಾ ಒಂದಾನೊಂದು ಕಾಲದಲ್ಲಿ ತತ್ತ್ವವಾಗಿದ್ದುವು. ಆ ಕಾಲದ ಅವಶೇಷ ಆಗಿದ್ದಾನೆ ಮಾಧೂ. ಈಗ ಯಶಸ್ಸು–ಶಕ್ತಿ–ರಾಜಕೀಯ ಅಧಿಕಾರ—ಬಹುಮತರಾಜ್ಯ ಇವುಗಳ ಕಾಲ ಬಂದಿದೆ. ನೋಡಿದೆಯಲ್ಲ '೪೨ರಲ್ಲಿ? ಮಾಧವನ ಕಾಲದ ಎಲ್ಲ ದೇಶ ಭಕ್ತರು ನಾ ಮುಂದೆ ನೀ ಮುಂದೆ ಎಂದು ಜೇಲಿಗೆ ಹೋದರು. ಮಿಕ್ಕವರು ಚಳವಳಕ್ಕೆ ಯಶಸ್ಸು ಮುಖ್ಯ ಎಂಬ ಒಂದೇ ದೃಷ್ಟಿಯಿಂದ ಕೊಲೆ-ಸುಲಿಗೆ ಗಳಿಗೆ ಹಿಂದು ಮುಂದು ನೋಡಲಿಲ್ಲ. ಪ್ರಸಂಗ ಬಂದೊಡನೆ ಚುನಾವಣೆ ಯಲ್ಲಿ ಸೇರಿದೆವು, ಬಹುಮತ ಇದ್ದಲ್ಲಿ ಕಾಂಗ್ರೆಸ ರಾಜ್ಯ ನಡೆಸುವೆವು."

" ಅಂದರೆ, ನಮಗೆ ನ್ಯಾಯ ಸಿಕ್ಕೀತೆಂದು ಆಶೆ ಬೇಡ. "

" ಯಾಕೆ ? ಅನಂತಾ, ನಿನಗೆ ಯಾಕೆ ಸಂಶಯ ? "

" ನಾನು ಬ್ರಿಟಿಶ ಸರಕಾರದ ಸೇವಕ, ಅರ್ಥಾತ್ ಕಾಂಗ್ರೆಸದ ಶತ್ರು. "

" ಹುಚ್ಚು ಹಿಡಿದಿದೆ ನಿನಗೆ, ಅನಂತಾ. ಪೂರ್ಣ ಖಾದಿ, ಇಲ್ಲದ್ದರೆ ಹೊರಗಾದಿ ಎಂಬ ದುರಭಿಮಾನ ಈಗ ಕಾಂಗ್ರೆಸಿಗಿಲ್ಲ. ಇದಲ್ಲದೆ, ಮನಸಾ

ಬ್ರಿಟಿಶರಿಗೆ ಶರಣು ಹೋದವರೆಂದರೆ ಕೊನೆಯ ವರೆಗೂ ಮುಸಲ್ಮಾನರೆ. ಕಾಂಗ್ರೆಸಿಗೆ ಸೇರಲಿ ಸೇರದಿರಲಿ, ಪ್ರತಿಯೊಬ್ಬ ಹಿಂದು ಬ್ರಿಟಿಶರಿಗೆ ಶತ್ರು ಆಗಿದ್ದನು. ''

ಅನಂತನಿಗೆ ಆಶ್ಚರ್ಯವಾಯಿತು. ಹಮ್ಯಾನ ಬುದ್ಧಿವಾದ, ಅಧಿಕಾರ ವಾಣಿ ಇವೆಲ್ಲ ಒಮ್ಮೆಲೆ ಎಲ್ಲಿಂದ ಬಂದುವು ?

" ಹಮ್ಯಾ, ನನ್ನ ವಿಷಯ ನಿನಗೊಬ್ಬನಿಗೆ ಹೇಳಿರುವೆ—"

" ಸಾಕು, ಬಿಡೊ ! ಹೇಳಿರುವನಂತೆ ! ೨-೩ ತಿಂಗಳು ನಿನ್ನ ಮನೆಯಲ್ಲಿ, ನಿನ್ನ ದುಡ್ಡಿನಿಂದ ಚಳವಳ ನಡೆಸಿದ ನನಗೆ ಯಾರು ಹೇಳಬೇಕಾಗಿದೆ? ಅದಕೇ ಹೇಳಿದೆನಲ್ಲ, ನಾನು ಅರಸು, ನೀನು ಮಂತ್ರಿ ! "

. . . . .

ಅನಂತ ಮನೆಯಿಂದ ಹೊರಬಿದ್ದನು. ಈ ಮನೆ, ಈ ಅಧಿಕಾರ ವೈಭವ ಇದೆಲ್ಲ ನಿಜವಾಗಿ ಹಮ್ಯಾನ ಪ್ರಯತ್ನದಿಂದಲೆ ಸಾಧಿಸಿದ್ದು. ಛೆ! ಇದೇನು—ಹಮ್ಯಾ—ಹಮ್ಯಾ ! ನನ್ನಲ್ಲಿ ಯೋಗ್ಯತೆ ಇಲ್ಲದಿದ್ದರೆ ಹತ್ತು ಹಮ್ಯಾ ಜನರಿಂದಲೂ ಏನಾಗಬಹುದಿತ್ತು ?....ಅನಂತ ಟ್ಯಾಕ್ಸಿಯನ್ನು ಕರೆಯಬೇಕೆಂದ, ಕೈಗಡಿಯಾರ ನೋಡಿದ; ನಡೆದು ಹೋಗಲು ಸಾಕಷ್ಟು ಹೊತ್ತಿದೆ, ಟ್ಯಾಕ್ಸಿಯಿಂದ ಹೋದರೆ ಬಹಳೇ ಮುಂಚಿತ ಹೋಗಬಹುದಾಗಿದೆ. ಆದ್ದರಿಂದ ಹಮ್ಯಾ ಹೇಳುವಂತೆ ' ನೋ ಟ್ಯಾಕ್ಸಿ ಕ್ಯಾಂಪೇನ. ' ಥೂ ! ಮತ್ತೆ ಹಮ್ಯಾ ! ಇದೇನು ? ಸ್ವಂತದ ಬುದ್ಧಿ ಇಲ್ಲದವರಂತೆ ವರ್ತಿಸುತ್ತಿರುವೆನಲ್ಲ ?....ಅನಂತ ಅವಸರವಸರವಾಗಿ ಹೆಜ್ಜೆಗಳನ್ನಿಡತೊಡಗಿದ.... ಮತ್ತೆ ಸ್ಮರಣೆಯ ಚಲಚ್ಚಿತ್ರ ಪ್ರಾರಂಭವಾಗಬಹುದೆಂದು ಹೆದರಿದ.... ಯಾಕೆಂದರೆ, ಇದೇ ದಾರಿಯಿಂದಲ್ಲವೆ ತಾವು ನಾಲ್ವರೂ ಗೆಳೆಯರು ಒಮ್ಮೆ ಮೆರವಣಿಗೆಯಲ್ಲಿ ನಡೆದು ಹೋದದ್ದು. ಅದೂ ಅಗಸ್ಟ ತಿಂಗಳಲ್ಲಿಯೆ .. ರಾಜಕಾರಣದೊಳಗ ಬಿದ್ದಿದ್ದಿಲ್ಲ ಅಂದ್ರೆ ಟಿಳಕರ ಆಯುಷ್ಯ ಇಷ್ಟು ಬೇಗ ಮುಗಿಯುತ್ತಿದ್ದಿಲ್ಲ—ಎಂದು ಆ ದಿನ ತಾನು ವಾದಿಸಿದ್ದ....ಪಾಪ ! ಮಾಧವ ನಿಜವಾಗಿಯೆ ಬುದ್ಧಿವಂತ; ಕಾಲೇಜದಲ್ಲಿದ್ದಾಗಂತೂ ಹಾಗೆನ್ನಿಸುತ್ತಿತ್ತು.... ರಾಜಕಾರಣದಲ್ಲಿ ಬಿದ್ದಿದ್ದಿಲ್ಲ ಅಂದ್ರೆ ಅವನ ಆಯುಷ್ಯ—ಛೆ ! ಯಾಕೆ ಕೆಟ್ಟ

ವಿಚಾರ ? ಸಾಯಲಿಕ್ಕೆ ಯಾವ ಕಾರಣಾನೂ ಬ್ಯಾಡ ಅಂದಿದ್ದ ಹಮ್ಮೂ.... ಮಾಧವನ ಯುಗ ಮುಗೀತು ಅಂತ ಹೇಳ್ತಾನಲ್ಲ ?....ಬಹುಮತದ ರಾಜ್ಯ ಅಂದರೆ ಮಾಧವನ ಯುಗ ಮುಗಿಧಾಂಗ ಅಂದ್ರೆ—ಹಹ ! — ಹಮ್ಮೂನಿಗೆ ಹೇಳ್ತೀನಿ—-ಬಹುಮತದ ರಾಜ್ಯ ಅಂದ್ರೆ ಬುದ್ಧಿವಂತರ ರಾಜ್ಯ ಅಲ್ಲ ಅಂತ ಅಂಧಾಂಗ ಆಯ್ತು ಅಂತ....ಅನಂತನ ನಗೆ ಬೀದಿಯ ಗಲಾಟೆಯೊಳಗೆ ಸೇರಿಕೊಂಡಿತು.

‡ ‡ ‡ ‡

೪. +ಕಾಮ

೨೩

ಸಂಜೆಯ ಐದು ಗಂಟೆಯ ಸಮಯ. ಸಾರ್ವಜನಿಕ ಸಭೆಗೆ ಹೋಗಬೇಕೆ ಹೋಗಬಾರದೆ—ಎಂದು ಹಮ್ಮೂನು ತೊಡಕಿನಲ್ಲಿದ್ದಾನೆ. ಸಭೆಗೆ ಹೋಗದಿದ್ದರೆ, ಶಾಸನಸಭೆಯ ಸದಸ್ಯನಾಗಿದ್ದ ತನ್ನ ನಡತೆಯಲ್ಲಿ ಕ್ರಮ ಭಂಗವಾದಂತಾಗುವುದು; ಅದಕಾಗಿ ಸಭೆಗೆ ಹೋಗಬೇಕೆಂದರೆ, ಇತ್ತ ನಾಲ್ವರೂ ಗೆಳೆಯರು ಮಾಧವನಲ್ಲಿ ಕೂಡಬೇಕೆಂದು ಯೋಚಿಸಿದ್ದು ನಿಷ್ಫಲವಾಗುವುದು....ಹಮ್ಮೂ ಬಹಳೊತ್ತು ವಿಚಾರ ಮಾಡಲಿಲ್ಲ....ಸಭೆ! ಮೆರವಣಿಗೆ! ಮಹಾರಾಯಾ, ಇಪ್ಪತ್ತು ವರ್ಷಗಳವರೆಗೆ ನಿದ್ರೆಯಲ್ಲಿ ಕೂಡ ಸಭೆ-ಮೆರವಣಿಗೆಗಳನ್ನು ನಡೆಸುವಷ್ಟು ಚಟ ಬಿದ್ದಿದೆ, ಸ್ವಾತಂತ್ರ್ಯ ಸಿಕ್ಕಿದ್ದಾದರೆ ಇವುಗಳ ಕಾಟವನ್ನು ತಪ್ಪಿಸಬಾರದೆ?—ಎಂದುಕೊಂಡ ಹಮ್ಮೂ. ನಿಜವಾಗಿಯೆ, ಈ ಸಭೆ ಮೆರವಣಿಗೆಗಳ ತೊಂದರೆ ಹೆಚ್ಚಾಗಿದೆ. ಮಾತಿಗೊಮ್ಮೆ ಸಭೆ, ಮಾತಿಗೊಮ್ಮೆ ಮೆರವಣಿಗೆ! ಸಭೆಯಲ್ಲಿ ಅದೇ ಉಪನ್ಯಾಸ, ಮೆರವಣಿಗೆಯಲ್ಲಿ ಅದೇ ಜಯಜಯಕಾರ!....ಹುಶ್, ಇನ್ನಾದರೂ ಸ್ವಲ್ಪ ವಿಶ್ರಾಂತಿ? ಬಿಡಲಿ, ನಾನಂತೂ ಮಾಧೂನ ಕಡೆಗೆ ಹೋಗುವವ—ಎನ್ನುತ್ತ ಚಹವನ್ನು ಮುಗಿಸಿ ಕೈಯೊಳಗಿನ ಕಪ್‌ನ್ನು ಮುಂದಿದ್ದ ಮೇಜಿನ ಮೇಲೆ ಇಟ್ಟ.

ಹಮ್ಮೂನು ಇರುತ್ತಿರುವುದು ಮುಂಬಯಿಯ ಒಂದು ಅನುಕೂಲ ಹಾಟೆಲದಲ್ಲಿ. ಸದ್ಯಕ್ಕೆ ಶಾಸನ ಸಭೆಯ ಅಧಿವೇಶನ ಇಲ್ಲದಿದ್ದರೂ ಹಮ್ಮೂನು ಮುಂಬಯಿಗೆ ಬಂದಿದ್ದಾನೆ. ಯಾಕೆ?....ಹಹ!.... ರಾಜ್ಯಾಧಿಕಾರ ಬದಲಾಯಿಸಿ ಸ್ವಾತಂತ್ರ್ಯ ಸ್ಥಾಪಿತವಾಗುವ ದಿನದ ಮುಂಬಯಿಯ ಉತ್ಸವದಲ್ಲಿ ಭಾಗವಹಿಸಲು....ಸರಿ, ಉತ್ಸವವೇನೂ ತಾನಿಲ್ಲದಿದ್ದರೂ ನಡೆಯುವುದು ಎಂದು ಹಮ್ಮೂನಿಗೆ ಗೊತ್ತು; ಆದರೆ ಸ್ವಾತಂತ್ರ್ಯ ಮಾತ್ರ ತಾನಿಲ್ಲದೆ ದೊರೆಯುವುದಿಲ್ಲ ಎಂದು ಹಮ್ಮೂ ಅಭಿಮಾನದಿಂದ ಹೇಳುತ್ತಿದ್ದ. ಅದಕಾಗಿಯೆ ತನ್ನ ಊರೊಳಗೆ ಉತ್ಸವವನ್ನು ನಡೆಸುವುದನ್ನು ಬಿಟ್ಟು ಬಂದಿದ್ದ. ಸ್ವಾತಂತ್ರ್ಯ ಊರಿನದಲ್ಲ, ಸ್ವಾತಂತ್ರ್ಯ ದೇಶದ್ದು. ದೇಶದ ರಾಜಧಾನಿ ಮುಂಬಯಿಯಲ್ಲ, ಹೊಸದಿಲ್ಲಿ. ಆದ್ದರಿಂದ ಸ್ವಾತಂತ್ರ್ಯದ ಶಾಸನಸಭೆ

ಎಂದರೆ ಹೊಸ ದಿಲ್ಲಿಯಲ್ಲಿ. ಆ ಶಾಸನ ಸಭೆಯ ಸದಸ್ಯನಾಗದಿದ್ದರೆ ತಾನು ಸ್ವಾತಂತ್ರ್ಯಯುದ್ಧದ ಸೇನಾಪತಿಯಾಗಿದ್ದು ಲಾಭವೇನು? ಈ ವಿಚಾರ ದಿಂದ ಹಮ್ಮೂ ದಿಲ್ಲಿಗೆ ಹೋಗಿದ್ದ. ಅದೇ ಮಾತನ್ನು ಸಾಧಿಸಿಕೊಳ್ಳುವುದ ಕ್ಕಾಗಿ ಕೆಲವರನ್ನು ಕಾಣಲು ಮುಂಬಯಿಗೆ ಬಂದಿದ್ದ. ಆದರೇನು? ಕೆಲಸ ಸಾಧಿಸುವ ಲಕ್ಷಣಗಳಿದ್ದಿಲ್ಲ. ಹಮ್ಮೂನಿಗೆ ಅಸಮಾಧಾನವಾಗಿತ್ತು, ಸಿಟ್ಟು ಬಂದಿತ್ತು. ಅದಕಾಗಿಯೆ, "ಹಾಳಾಗಲಿ ಸ್ವಾತಂತ್ರ್ಯೋತ್ಸವದ ಸಭೆ! ಮಾಧೂನ ಕಡೆಗೆಯೆ ಹೋದರಾಯಿತು" ಎಂದುಕೊಂಡ ಮತ್ತೊಮ್ಮೆ.... ಹುಂ!....ಆದರೇನು? ಮಾಧೂನ ಕಡೆಗೆ ಹೋದರೂ ಸುಖವಿಲ್ಲ!

. . . . .

"ಯಾಕೊ, ಮಾಧೂ, ನನ್ನ ಮ್ಯಾಲೇ ಯಾಕೆ ನಿನ್ನದಿಷ್ಟು ದೃಷ್ಟಿ?" ಹಮ್ಮೂ ಕೇಳಿದ್ದ. ಕಳೆದ ೮-೧೦ ದಿವಸಗಳಿಂದ ಮಾಧೂ ಮುಂಬಯಿ ಯಲ್ಲಿಯೇ ಇದ್ದಾನೆ. ಮಹತ್ವದ ಕೆಲಸಕ್ಕಾಗಿ ಎಂದು ತಾನು–ಹಮ್ಮೂ– ಈಗ ಮುಂಬಯಿಯಲ್ಲಿಯೆ ಇದ್ದಾನೆ. ಆದರೆ ಮಾಧೂನು ಇಷ್ಟೊಂದು ಅವಸರದಿಂದ ತನ್ನ ಬೆನ್ನುಹತ್ತಿ ಬಂದುದರಿಂದ ಹಮ್ಮೂನಿಗೆ ಸಂಶಯ. ಮತ್ತಾವ ಸಂಕಟ ಒದಗಿದೆ? ತನಗೊ? ನನಗೊ? ಹಮ್ಮೂನಿಗೆ ಗೊತ್ತು, ಮಾಧವನು ತಪ್ಪಿ ಕೂಡ ಸುಖದ ಹಾದಿಯನ್ನು ಹಿಡಿಯುವವನಲ್ಲ ಎಂದು. ಇದಲ್ಲದೆ, ಈಗ ಮಾಧೂ ಭೆಟ್ಟಿಯಾದ ವೇಳೆಯೂ ಅಂತಹದೆ ಇದೆ. ಇಂದು ಮಾರ್ಚ ತಿಂಗಳ ೧೯ನೆಯ ತಾರೀಕು. ೧೯೩೦.....ಒಂದು ವಾರದ ಹಿಂದೆಯೆ ಅಲ್ಲವೆ, ಗಾಂಧಿಯವರು ದಾಂಡಿ ಯಾತ್ರೆಯನ್ನು ಪ್ರಾರಂಭಿಸಿದ್ದು? ಹಮ್ಮೂನು ನಿರಾಶೆಯಿಂದ ಉಸುರ್ಗರೆದ.

"ಕೇಳೋ ಮುಂಚೆಯೆ ಹೆದರುವೆ ಏನು?" ಎಂದು ಮಾಧವ.

"ಕೇಳಿದರೂ ನೀನು ಹೇಳಲೊಲ್ಲೆ ಅಂತ ನಿರಾಶೆ."

"ಹೇಳ್ಬೇಕು ಯಾಕೆ? ನಿನಗೆ ತಿಳಿಯೋದಿಲ್ಲೇನು?"

"ಮಾಧೂ, ನಿನ್ನ ಮನಸ್ಸಿನೊಳಗ ಏನಿದೆ ಅಂತ ತಿಳಿದುಕೊಳ್ಳೋದು ಒಳಗಿದ್ದ ಶಿವನಿಗೆ ಕೂಡ ಕಷ್ಟ. ಶಿವ ಇರೋದು ಎದೆಯೊಳಗ, ಮಾತು ಬರೋದು ಬಾಯಿಯೊಳಗ. ಎದೆಯೊಳಗಿನ ವಿಚಾರ ಬಾಯಿಗೆ ಬಂದು ಮುಟ್ಟೋದರಾಗ ಬದಲಾಗೋದು. ಹಃ" ಹಮ್ಮೂನು ನಕ್ಕನು.

ಮಾಧವ ಒಂದು ನಿಮಿಷ ಸುಮ್ಮನಿದ್ದ. ಮುಖ ಕೆಳಗೆ ಮಾಡಿಕೊಂಡು ನಿಂತ. ಹಮ್ಮ್ಯಾನು ಆಶ್ಚರ್ಯಚಕಿತನಾಗಿ ನೋಡಿದ. ಇದೇನು! ಕಣ್ಣೀರು? ಆಂ—?

"ಏನು, ಮಾಧೂ, ಅಂತಹ serious ವಿಷಯ—?"

"ಹಮ್ಮ್ಯಾ, ಹೆದರಬೇಡ. ನನಗೂ ಏನೂ ಆಗಿಲ್ಲ, ಏನೂ ಬೇಕಾಗಿಯೂ ಇಲ್ಲ. ಆದರೆ ಒಂದು ವಿಚಾರ ಮನಸ್ಸಿನೊಳಗ ಬಂದಿದೆ. ಅದಕ್ಕ ಸಮಾಧಾನ ಆಗದೇ–" ಮಾಧವ ತಡೆದು ಸಿಟ್ಟು ತಡೆನವರಂತೆ ಉಸಿರೆಳೆದ. ಹಮ್ಮ್ಯಾನಿಗೆ ತಿಳಿಯದಂತಾಯಿತು. ಯಾವ ವಿಚಾರ? ಇವನಿಗೆ ಎರಡನೆಯ ಮದುವೆ ಮಾಡಿಕೊಳ್ಳಬೇಕಾಗಿದೆ ಏನು? ಕಳೆದ ನಾಲ್ಕೈದು ದಿವಸಗಳಿಂದ ಇವನು ಇಲ್ಲಿಯ ಕಾಂಗ್ರೆಸ ಕಚೇರಿಗೆ ಹೋಗುತ್ತಲಿದ್ದಾನೆ. ಹೊಸತಾಗಿ ದೇಶಸೇವಿಕೆಯರದೊಂದು ಪಿಡುಗು ಎದ್ದಿದೆ. ಹಮ್ಮ್ಯಾನ ಮುಖದಲ್ಲಿ ಮುಗುಳ್ನಗೆ ಮೂಡಿತು.

"ಮಾಧೂ, ದೇಶಸೇವಾದ್ದೊ ಏನು ದೇಶಸೇವಿಕಾ ಅವರದೊ ವಿಚಾರ? ಆಂ?" ಎಂದು ಕೇಳಿದನು.

"ದೇಶಸೇವಾದ್ದು."

ಹಮ್ಮ್ಯಾನಿಗೆ ನಿರಾಶೆಯಾಯಿತು. ಈ ಮಾಧೂ ಅಂದರೆ ಹುಟ್ಟಾ ಅರಸಿಕ. ದೇಶಸೇವಾದ್ದೂ ಅಂತ! ದೇಶಸೇವಾದ ಗುತ್ತಿಗೆಯನ್ನೇ ಹೊತ್ತಾನಲ್ಲ ಗಾಂಧಿ? ದೇಶಸೇವಿಕಾಗೆ ಸಂಬಂಧಿಸಿದ್ದು ಅಂತ ಅಂದಿದ್ದರೆ ಅಡ್ಡಿ ಇದ್ದಿರಲಿಲ್ಲ. ಯಾಕಂದರೆ, ಸ್ವತಃ ತನಗೂ ಅದೇ ವಿಚಾರ ಇದ್ದಿತು. ಮುಂಬಯಿಯೊಳಗಿನ ದೇಶಸೇವಿಕೆಯರ ತಂಡನ್ನ ನೋಡಿದರೆ ಯಾವ ತರುಣನೂ ದೇಶಸೇವೆಯೊಳಗ ಧುಮುಕಲಿಕ್ಕೆ ಹಿಂದ್ಮುಂದು ನೋಡುತ್ತಿರಲಿಲ್ಲ. ಆದರೂ ಹಮ್ಮ್ಯಾ ಇನ್ನೂ ಧುಮುಕಿರಲಿಲ್ಲ. ನಡೆದು, ಕಾಲುನೋವು ಮಾಡಿಕೊಂಡು ಸ್ವರ್ಗಕ್ಕೆ ಹೋಗೋದಕಿಂತ ಸ್ವರ್ಗನೆ ಇಲ್ಲಿಯ ವರೆಗೆ ಬಂದರೆ ಉತ್ತಮ. ನೋಡೋಣ, ಎಂದುಕೊಂಡಿದ್ದ ಹಮ್ಮ್ಯಾ. ಈಗ ಮಾಧವನ ಮನಃಸ್ಥಿತಿಯಿಂದ ಅವನಲ್ಲಿ ಕಲ್ಪನೆ ಹುಟ್ಟಿತು. ಮಾಧವನಂತಹ ಅನುಭವದ ತರುಣ ಕಣ್ಣೀರು ತರೋದು ಯಾಕೆ? ಸತ್ತ ಹೆಂಡತಿ ಸ್ಮರಣೆಗೆ ಬಂದಿರಬೇಕು ಅಂತ. ಆದ್ದರಿಂದ ಹೆಂಗಸರ ಕಡೆ ಇವನ ಲಕ್ಷ್ಯ ಎಳೆದಿರಬೇಕು

ಅಂತ. ಇಂತಹ ವಿಷಯದಲ್ಲಿ ಗೆಳೆಯನಿಗೆ ಸಹಾಯ ಮಾಡಲು ಹಮ್ಮೂ ಒಂದು ಕಾಲಿನಮೇಲೆ ಸಿದ್ಧನಿದ್ದ. ಯಾಕೆಂದರೆ, ಆ ನೆವದಿಂದ ತನಗೂ ದೇಶ ಸೇವೆಯ ತೊಡಕಿಲ್ಲದೆ ಇಷ್ಟಪರಿಚಯ ಮಾಡಿಕೊಳ್ಳುವ ಸುಸಂಧಿ ದೊರೆಯು ತ್ತಿತ್ತು.

"ದೇಶಸೇವಾದ್ದ?" ಎಂದ ನಿರಾಶೆಯ ದನಿಯಲ್ಲಿ.

ಮಾಧವನು ಚಕಿತನಾಗಿ, ಅಪಮಾನಿತನಾಗಿ ಹೀಗೆ ಮಾತನಾಡಿದ ತನ್ನ ಗೆಳೆಯನನ್ನು ಒಮ್ಮೆಲೆ ದಿಟ್ಟಿಸಿ ನೋಡಿದ. ಹಮ್ಮೂ ಹೆದರಿಕೊಂಡ. ತನ್ನ ವಿಚಾರದ ಭರದಲ್ಲಿ ತನ್ನ ಗುಟ್ಟು ಹೊರಬೀಳುವಂತಾಯಿತಲ್ಲ ಎಂದು.

"ಏನು, ಹಮ್ಮೂ, ಹೀಗೆ ಕೇಳ್ತೀಯಾ?"

"ಅಲ್ಲೊ. ದೇಶಸೇವಾದ ವಿಚಾರ ಯಾವಾಗಲೂ ನಿನ್ನ ತಲೆಯೊಳಗ ಇದ್ದೇ ಇರ್ತದ. ಅಪ್ಪಿತಪ್ಪಿ ಹೊಸ ವಿಚಾರ ಬಂದಿದೆ ಏನೊ ಅಂತ ಅನ್ನಿಸಿತ್ತು. ನೀನು ಮತ್ತೆ ದೇಶಸೇವಾ ಅಂತೇ ಅಂದಿ. ಅದಕ್ಕ ಹಾಗೆ ಕೇಳಿದೆ."

"ಹೊಸ ವಿಚಾರ ಬಂದಿದೆ." ಮಾಧವನ ದನಿ ಬಿರುಸಾಯಿತು. ಯಾವುದೊ ಆವೇಶವನ್ನು ಅವನು ತಡೆಯಲು ಯತ್ನಿಸುತ್ತಿರುವಂತೆ ಕಂಡು ಬಂದಿತು. ಅವನ ಮೈ ನಡುಗುತ್ತಿತ್ತು. "ಹೊಸ ವಿಚಾರ ಬಂದಿದೆ. ಹಳೆಯ ದನ್ನು ಬಿಡಬೇಕೇನೊ ಎಂದು ಅನ್ನಿಸಿದೆ. ಆದರೆ ತತ್ತ್ವಕ್ಕೆ ದ್ರೋಹಬಗೆ ದಂತಾದೀತಲ್ಲ—ಎಂದು ಸಂಶಯ. ಅದಕ್ಕಾಗಿ ನಿನಗೆ ಕೇಳುತ್ತಲಿದ್ದೇನೆ."

"ಯಾವ ವಿಚಾರ?"

"ಅಹಿಂಸೆಯನ್ನು ಬಿಟ್ಟು ಬಿಡುವುದು."

ಹಮ್ಮೂನು ಪೆಚ್ಚಾದ ಕಳೆಯಿಂದ, ಅರೆತೆರೆದ ಬಾಯಿಯಿಂದ ಗೆಳೆಯ ನನ್ನು ನೋಡತೊಡಗಿದನು.

"ಹಮ್ಮೂ, ಅಹಿಂಸೆಯನ್ನು ಬಿಟ್ಟು ಬಿಡುವುದಿಷ್ಟೆ ಅಲ್ಲ. ಪರಿಣಾಮ ಕಾರಕವಾಗುವಂತಹ ಹಿಂಸಾಶಕ್ತಿಯನ್ನು ಸಂಘಟಿಸುವುದು."

ಹಮ್ಮೂನು ನಕ್ಕ. "ನಿನ್ನ ತಲೀಮ್ಯಾಲೆ ತಣ್ಣೀರು ಸುರುವ್ತೀನಿ ಕೂಡು, ಮುತ್ತಿನಂತಹ ಬೆತ್ತದಿಂದ ಹೊಡೀತೀನಿ ಕೂಡು" ಎಂದು ನಗೆ ಯಾಡುತ್ತ ಅವನನ್ನು ಹತ್ತಿರ ಕರೆದುಕೊಂಡನು.

ಮಾಧವನ ಮಾತನ್ನು ಕೇಳಿಕೇಳಿದಂತೆ ಹಮ್ಮೂನ ಹೆದರಿಕೆ ಹೆಚ್ಚಾಯಿತು. ಇವನು ತನ್ನನ್ನಾಗಲಿ ಇನ್ಸ್ಪೆಕ್ಟರನ್ನಾಗಲಿ ಕಣ್ಣುಮಿಟುಕಿಸದೆ ದೊಡ್ಡ ಗಂಡಾಂತರದಲ್ಲಿ ನೂಕಬಹುದಾದ ಸಾಹಸಿಗ ಎಂದೆನ್ನಿಸಿತು ಹಮ್ಮೂನಿಗೆ. ಮಾಧವನು ಹೇಳಿದ ಮಾತು, ಹೇಳುವ ರೀತಿ—ಇವುಗಳಿಗಾಗಿ ತನ್ನ ಮೈ ಜುಮ್ಮೆಂದಿತ್ತು. ಹಿಂದಿನ ೨–೩ ದಿನಗಳ ಕತೆಯನ್ನು ಹೇಳಿದನು ಮಾಧವನು. ಮೊದಲ ದಿನ ತಾನು ಬೀದಿಯ ಬದಿಗೆ ನಿಂತು ನೋಡಿದನಂತೆ. ಮೆರವಣಿಗೆ ಹೊರಟಿದೆ. ಸ್ವಯಂಸೇವಕರು ಮುಂದೆ ನಾಲ್ಕು–ನಾಲ್ಕರಂತೆ ಸಾಲಾಗಿ ನಡೆದಿದ್ದಾರೆ. ಕಿಲ್ಲೆಯೊಳಗೆ ಮೆರವಣಿಗೆಗೆ ಪ್ರತಿಬಂಧ. ಪೋಲೀಸರೂ ಸಾರ್ಜಂಟರೂ ಕೈಯೊಳಗೆ ದೊಣ್ಣೆಯನ್ನು ಹಿಡಿದುಕೊಂಡು ನಿಂತಿದ್ದಾರೆ. ದೊಡ್ಡ ಬೀದಿಯ ಅಡ್ಡ ದಪ್ಪದ ಬಿಳಿಯ ಗೆರೆಯನ್ನು ಬರೆದಿದ್ದಾರೆ. ಮೆರವಣಿಗೆಯ ಸ್ವಯಂಸೇವಕರು ಆ ಗೆರೆಯ ವರೆಗೆ ಬಂದು ನಿಂತರು. ಮಾಧವನ ಎದೆ ಹಾರುವ ಸದ್ದು ಅವನ ಕಿವಿಯೊಳಗೆ ಗುಡುಗಿನಂತೆ ಕೇಳಿಸಿತು. ನೆರೆದ ಜನಸಮುದಾಯವೆಲ್ಲ ಅತ್ಯಂತ ಸ್ತಬ್ಧವಾಗಿದೆ, ಉಸಿರು ಹಿಡಿದವರಂತೆ ನಿಂತಿದೆ. ಸಾರ್ಜಂಟನೊಬ್ಬನು ಬಂದನು, ಸ್ವಯಂಸೇವಕನೊಬ್ಬನೊಡನೆ ಏನನ್ನೋ ಮಾತಾಡಿದನು. ಆ ಸ್ವಯಂಸೇವಕನು ಹಿಂದೆ ಕೈಮಾಡಿದನು, ಅಷ್ಟರಲ್ಲಿ ಎಲ್ಲ ಸಾಲ್ಗಳ ವ್ಯವಸ್ಥೆಯನ್ನು ಮಾಡುತ್ತ ಸ್ವಯಂಸೇವಕರ ಕಪ್ತಾನನು ಬಂದನು. ಸಾರ್ಜಂಟನ ಬಿಗುಮೋರೆ, ಕಪ್ತಾನನ ನಗುಮೋರೆ; ಅವರು ಏನನ್ನು ಮಾತನಾಡುತ್ತಿದ್ದರೊ ಯಾರಿಗೂ ಕಲ್ಪನೆ ಇಲ್ಲ. ಕಾಲ್ಗಳನ್ನು ಗಟ್ಟಿಯಾಗಿ ಆತುರತೆಯಿಂದ ಮುಖವನ್ನು ಮುಂದೆ ಚಾಚುತ್ತಿದ್ದಾರೆ ನಿಂತವರೆಲ್ಲ; ಬಿರುಗಾಳಿಗೆ ಬೇಸಿಕಿತ್ತು ಬಾಗಿ ನಿಂತ ಗಿಡಗಳ ಗುಂಪಿನಂತೆ ಕಾಣುತ್ತಿದೆ ಜನಸಮುದಾಯ. ಮಾಧವನು ಬೀದಿಯ ಎದುರು ಬದಿಗೆ ಗುಂಪುಗಟ್ಟಿ ನಿಂತ ಜನರನ್ನು ನೋಡಿದ್ದಾನೆ; ಪ್ರತಿಯೊಂದು ಮುಖದ ತುಂಬ ಭಯ ಆತುರಗಳಿಂದ ಅರಳಿದ ಕಣ್ಗಳೆ ಕಾಣುತ್ತಿವೆ! ಅದೇನು ?.... ಸಾರ್ಜಂಟ ಕಪ್ತಾನರ ಮಾತು ಮುಗಿಯಿತು. ಸಾರ್ಜಂಟನು ಬಂದು ಪೋಲೀಸರೊಡನೆ ನಿಂತನು. ಎಲ್ಲರೂ ಕೈಯಲ್ಲಿ ದೊಣ್ಣೆಗಳನ್ನು ಸಜ್ಜು ಮಾಡಿಕೊಂಡರು. ಅತ್ತ ಕಪ್ತಾನನು ಲಗಬಗೆಯಿಂದ ಎಲ್ಲ ಸಾಲ್ಗಳ ಸ್ವಯಂಸೇವಕರಿಗೆ ಏನನ್ನೋ ಹೇಳುತ್ತ ನಡೆದ. ಕೊನೆಯ ವರೆಗೂ ಹೋಗಿ ಗೆರೆಯ

ಹತ್ತಿರದ ಮುಂದಿನ ಸಾಲಿಗೆ ಬಂದ; ಒಮ್ಮೆ ತಿರುಗಿ ನಿಂತು ಎಲ್ಲ ಸಾಲ್ಗಳನ್ನೂ ನೋಡಿದ; ಎಲ್ಲರಿಗೂ ಮುಗುಳ್ನಗೆಯು 'ಸಲಾಮು'ನ್ನು ಕೊಟ್ಟನೇನೊ? ಆ ಮೇಲೆ ಮೊದಲ ಸಾಲದ ಮುಂದೆ ಬಂದು ನಿಂತು, ತನ್ನೊಡನೆ ಮಾತನಾಡಿದ ಸಾರ್ಜಂಟನಿಗೂ ಮುಗುಳ್ನಗೆಯ ಮುಟ್ಟಿಸಿ ಸೀಟಿಯನ್ನು ಊದಿದ. ಭಯ ಆತುರಗಳ ಆ ಸ್ತಬ್ಧ ವಾತಾವರಣದಲ್ಲಿ ಸೀಟಿಯ ಸದ್ದು ಎಲ್ಲರ ಎದೆಯನ್ನು ನಡುಗಿಸಿತು. ಸಾರ್ಜಂಟರೂ ಪೋಲೀಸರೂ ಆ ಸೀಟಿ ತಮಗೂ ಆಜ್ಞೆ ಕೊಡುವುದೆಂಬಂತೆ ಡೊಣ್ಣೆಯನ್ನು ಗಟ್ಟಿಯಾಗಿ ಹಿಡಿದುಕೊಂಡರು. ಮುಂದಿನ ಸಾಲನ್ನು ಬಿಟ್ಟು ಮಿಕ್ಕ ಎಲ್ಲ ಪೋಲೀಸರು ಒಮ್ಮೆಲೆ ಸುತ್ತಲು ನೆರೆದ ಜನಸಮುದಾಯವನ್ನು ಎದುರಿಸಿದರು....ಹ!....ಸಾವಿರಾರು ಮುಖ ಗಳಿಂದ ಇದುವರೆಗೆ ತಡೆಯಲ್ಪಟ್ಟ ಉಸಿರು ಒಮ್ಮೆಲೆ ಹೊರಗೆ ಬಂದಿತು. ಏನು–ಏನಿದು? ಕಪ್ತಾನನು ಗೆರೆಯನ್ನು ದಾಟಿದ್ದಾನೆ. ಇಬ್ಬರು ಸಾರ್ಜಂಟರು ಡೊಣ್ಣೆಯಿಂದ ಅವನ ತಲೆಗೆ, ಭುಜಗಳಿಗೆ, ಬೆನ್ನಿಗೆ ಬೀಸಿ ಬಲವಾದ ಪೆಟ್ಟು ಗಳನ್ನು ಹಾಕುತ್ತಿದ್ದಾರೆ....ಒಂದು, ಎರಡು, ಮೂರು—ತಡೆಯದಾಯಿತು. ಮಾಧವನು ಕಣ್ಣು ಮುಚ್ಚಿದನು. ಇನ್ನಿಷ್ಟು ತಡೆಯದಾಯಿತು. ಮೆಲ್ಲನೆ ಕಣ್ದೆರೆದ. ಕಪ್ತಾನನು ಎಚ್ಚರದಪ್ಪಿ ಬಿದ್ದಿದ್ದಾನೆ. ೩–೪ ಖಾದಿ ಸಮವಸ್ತ್ರ ದವರು ಬಂದರು, ಅವನನ್ನು ಎತ್ತಿಕೊಂಡು ಹೋದರು....ಜನ ಏನು ಮಾಡು ತ್ತಿದೆ?....ಮಾಧವ ಸುತ್ತಲೂ ನೋಡಿದ..ಜನ ಹೆದರಿದೆಯೆ?...ಇದೇನು?.... ಮುಗಿದಿಲ್ಲ ಇನ್ನೂ! ಮುಂದಿನ ಸಾಲದ ನಾಲ್ವರು ಸ್ವಯಂಸೇವಕರು ಗೆರೆ— ಗೆರೆಯನ್ನು ದಾ—ದಾ—ದಾಟುತ್ತಿದ್ದಾರೆ! ಹಿಂದಿನಿಂದ ಎಲ್ಲ ಸಾಲ್ಗಳೂ ಒಂದು ಹೆಜ್ಜೆ ಮುಂದೆ ಸರಿಯುತ್ತಿವೆ! ಅಯ್ಯೊ! ಅಯ್ಯೊ! ಸಾವಿರಾರು ಮುಖ ಗಳಿಂದ ಕನಿಕರದ ದನಿ....ನಾಲ್ವರೂ ಸ್ವಯಂಸೇವಕರಿಗೆ ಮೊದಲಿನಂತೆ ಬಲ ವಾದ ಏಟುಗಳು ಬೀಳುತ್ತಲಿವೆ! ಅವರು ಸುಮ್ಮನೆ ನಿಂತಿದ್ದಾರೆ....ಒಬ್ಬನು "ಗಾಂಧಿ ಮಹಾರಾಜಕೀ ಜೈ!" ಎಂದ, ತಲೆಯ ಮೇಲೆಯೆ ಬಿತ್ತು ಡೊಣ್ಣೆ! ಎಂತಹ ಪೆಟ್ಟು! ಸಾರ್ಜಂಟನು ಡೊಣ್ಣೆಯನ್ನು ಬಿಸುಡಿ ಅಂಗೈ ಗಳನ್ನು ತಿಕ್ಕಿಕೊಳ್ಳುತ್ತಲಿದ್ದಾನೆ! ಅದನ್ನು ನೋಡಿ ಮತ್ತೊಬ್ಬ ಡೊಣ್ಣೆಯ ಸಾರ್ಜಂಟ ಅಲ್ಲಿ ಬಂದು ನಿಂತನು....ನಾಲ್ವರೂ ನಿಶ್ಚೇಷ್ಟಿತರಾದರು....ನಾಲ್ವ ರನ್ನೂ ಮೊದಲಿನಂತೆ ಆಸ್ಪತ್ರೆಗೆ ಸಾಗಿಸಲಾಯಿತು....ಮತ್ತೆ ನಾಲ್ವರು ಗೆರೆ

ದಾಟಿದರು, ಮತ್ತೆ ಡೊಣ್ಣೆಯ ಪೆಟ್ಟು—ಅಯ್ಯೋ! ಎಂದಿತು ಮಾಧವನ ಕರುಳು. ಅವನ ಮುಖ ಕೆಂಪೇರಿತು, ಉಸಿರು ಬೆಚ್ಚಗಾಯಿತು, ಸುತ್ತಲೂ ನೋಡಿದನು. ಜನ ಸ್ತಬ್ಧವಾಗಿ ನಿಂತಿದೆ. ಜನರ ಕಣ್ಣುಗಳನ್ನು ನೋಡಿದನು. ಹೌಹಾರಿದ ಕಳೆ ಇದೆ, ಹೆದರಿಕೆಯ ಕಳೆ ಇದೆ ಆ ಕಣ್ಣುಗಳಲ್ಲಿ, ಥೂ! ಹಾಳಾಗಲಿ ಇಂಥಹ ಷಂಢರ ಸತ್ಯಾಗ್ರಹ ಎಂದುಕೊಂಡ. ಈಗ ಆ ಸಾರ್ಜಂಟರನ್ನು ಮುತ್ತಬೇಕು, ಕಾಲ್ಕೆಳಗೆ ತುಳಿಯಬೇಕು, ಮುಸುಡೆಯನ್ನು ಪುಡಿಪುಡಿ ಮಾಡಬೇಕು—" ಗಾಂಧಿ ಮಹಾರಾಜಕೀ ಜೈ! " ಡೊಣ್ಣೆಯೇಟನ್ನು ಸಹಿಸುತ್ತಲಿದ್ದ ಸ್ವಯಂಸೇವಕನು ಕೂಗಿದ. ಕೂಡಲೆ, ಇಡಿಯ ಜನಸಮುದಾಯವು " ಗಾಂಧಿ ಮಹಾರಾಜಕೀ ಜೈ! " ಎಂದು ಘೋಷಿಸಿದರು. ಮುಂದೇನಾಯಿತೊ ತಿಳಿಯಲಿಲ್ಲ. ನೆರೆದ ಜನರು ಜಯಜಯಕಾರವನ್ನು ಮಾಡುವುದೊಂದೇ ತಡ ಹೆದರಿದ ಹೋರಿ ಹೌಹಾರಿ ತಲೆ ಹಾಕುತ್ತ ಕಂಗೆಟ್ಟು ಓಡುವಂತೆ ಸಾರ್ಜಂಟರೂ ಪೋಲೀಸರೂ ಮುಖ ಕೆಳಗೆಮಾಡಿ, ಡೊಣ್ಣೆಯನ್ನು ಮೇಲೆತ್ತಿಕೊಂಡು ಜನಸಂದಣಿಯಲ್ಲಿ ನುಗ್ಗಿದರು. ಹಾಹಾಕಾರವೆದ್ದಿತು. ಸ್ವಯಂಸೇವಕರು ಮಾತ್ರ ನಿಂತಲ್ಲಿಯೆ ನಿಂತಿರುವುದನ್ನು ಮಾಧವನು ಕಂಡನು. ಜನರು ಮಾತ್ರ ದಿಕ್ಕೆಟ್ಟು ಓಡುತ್ತಿದ್ದರು. ತಾನೂ ಅವರೊಡನೆಯೆ ಓಡಿದ ಎಂಬುದು ತರುವಾಯ ಲಕ್ಷಕ್ಕೆ ಬಂದು ಮಾಧವನಿಗೆ ನಾಚಿಕೆಯಾಗಿತ್ತು. ಭುಜಕ್ಕೆ ಒಂದು ಡೊಣ್ಣೆಯ ಏಟೂ ತಾಕಿತ್ತು. ಆ ದೃಶ್ಯದ ಸ್ಮರಣೆಗಾಗಿ ಮಾಧವನ ಕಣ್ಣುಗಳಿಂದ ನೀರು ದಳದಳ ಹರಿಯುತ್ತಿತ್ತು. ಹಲ್ಲುಕಚ್ಚಿ, ಮುಷ್ಟಿ ಬಿಗಿದು ಹೇಳಿದ.

" ಇಂತಹ ಜನರನ್ನು ಹಣ್ಣು ಮಾಡುವುದಕ್ಕೆ ಹಿಂಸಾಶಕ್ತಿಯನ್ನೆ ಸಂಘಟಿಸಬೇಕು. "

ಹಮ್ಮೂನಿಗೆ ಏನು ಮಾತನಾಡಬೇಕೆಂಬುದು ತಿಳಿಯದಂತಾಯ್ತು. ಎಷ್ಟೊತ್ತಾದರೂ ಮಾಧವನು ಸುಮ್ಮನಿದ್ದುದನ್ನು ಕಂಡು ಕೊನೆಗೆ ತಾನೇ ಮಾತನಾಡಿದ:—

" ಮಾಧೂ, ಸ್ವಯಂಸೇವಕರೆ ಬುದ್ಧಿಪೂರ್ವಕ ಹೊಡೆಸಿಕೊಳ್ಳುವಾಗ ಹೊರಗಿನಿಂದ ನಾವೂ ನೀವೂ ವಿಚಾರಮಾಡಿ ಉಪಯೋಗವೇನು? "

“ ಆ ಮಾತು ತಪ್ಪು, ಹಮ್ಮೂ, ನನಗೂ ಮೊದಲು ಹಾಗೇ ಅನ್ನಿಸುತ್ತಿತ್ತು. ನಿಃಶಸ್ತ್ರ ಪ್ರತೀಕಾರ, ಅಹಿಂಸೆ ಇವು ವಿಧಾಯಕ ತತ್ತ್ವ ಅಂತ ತಿಳಿದಿದ್ದೆ. ”

“ ಅಂದ್ರೆ? ಈಗ ಹೋಯಿತೇನು ನಿನ್ನದು ಗಾಂಧಿಯ ಮೇಲಿನ ವಿಶ್ವಾಸ? ”

“ ವಿಶ್ವಾಸ ಹೋಗಲಿಲ್ಲ, ಜ್ಞಾನ ಬಂದಿದೆ ಅಂತ ಹೇಳಬಹುದು. ಗಾಂಧಿಯವರು ಈ ಮಾತನ್ನು ಹೇಳಿದ್ದಕ್ಕೆ ಕಾರಣ ಏನು ಅಂಬೋದು ಈಗ ನನಗೆ ತಿಳಿದಿದೆ. ನನಗೆ ಶಸ್ತ್ರ ಇಲ್ಲ, ನಾವು ಹೇಡಿಗಳು, ಅದಕ್ಕೆ ನಮ್ಮದು ನಿಃಶಸ್ತ್ರ ಪ್ರತೀಕಾರ ಇರಬೇಕು, ಅಹಿಂಸಾ ಇರಬೇಕು ಅಂತ ಯಾಕೆ ಹೇಳಿರಬಾರದು ಗಾಂಧಿಯವರು? ”

ಹಮ್ಮೂ ನಕ್ಕನು. ಇದನ್ನೆಲ್ಲ ಈ ದಿನ ಮಾಧೂನು ನನ್ನ ಮುಂದೆ ಯಾಕೆ ಹೇಳುತ್ತಿರುವ? ನನ್ನಿಂದ ಯಾವುದೊ ಕೆಲಸ ಆಗಬೇಕಾಗಿದೆ ಇವನ ಮನಸ್ಸಿನಲ್ಲಿ. ಯಾವ ಕೆಲಸ? ಮಾಧೂನ ಕೆಲಸ ಅಂದ್ರೆ ಯಾವಾಗಲೂ ಪೇಚಾಟದ ಕೆಲಸ. ಯಾವ ಹೊಸ ಪೇಚನ್ನು ಹೂಡಿರುವನೊ?

“ ಹಾಗಾದರೇನು? ನಾನೂ ನೀನೂ ಕೂಡಿ ಹಿಂಸಾಶಕ್ತಿಯನ್ನು ಸಂಘಟಿಸಬೇಕು ಅನ್ನುವೆಯಾ? ” ನಗೆಯಿಂದಲೇ ಕೇಳಿದ ಹಮ್ಮೂ.

ಮಾಧವನು ಸುಮ್ಮನಿದ್ದ. ಮನಸ್ಸಿನೊಳಗಿನ ಉದ್ವೇಗವನ್ನೆಲ್ಲ ಹೊರಗೆಡುಹಿದ್ದರಿಂದ ಈಗ ಅವನು ವಿಚಾರ ನಿರ್ವಿಣ್ಣನಾಗಿದ್ದನೇನೊ? ಅಂತೂ ಕೊನೆಗೆ ಉಸುರ್ಗರೆದು, “ಹಮ್ಮೂ, ನೀನು ಹೇಳಿದ್ದೆ ನಿಜ. ಸ್ವಯಂಸೇವಕರು ಬುದ್ಧಿಪೂರ್ವಕ ಅಹಿಂಸೆಯಿಂದ ಆಚರಿಸುವರು. ನಿಜ. ಅದಕಾಗಿಯೆ ನೆರೆದ ಜನತೆ ಹಿಂಸೆಗೆ ತೊಡಗಲು ಅವರು ಅಂದಿನ ಕಾರ್ಯಕ್ರಮವನ್ನು ತಡೆದಿರಬಹುದು. ” ಎಂದು ತನ್ನಷ್ಟಕ್ಕೇ ವಿಚಾರಮಗ್ನನಾದ. ಮರುಗಳಿಗೆಯಲ್ಲಿ ಒಮ್ಮೆಲೆ ಗಟ್ಟಿಯಾಗಿ ನಕ್ಕ.

“ ಯಾಕೊ? ಏ—ನು? ” ಎಂದು ಆಶ್ಚರ್ಯದಿಂದ ಹಮ್ಮೂ ಕೇಳಿದ.

ಮಾಧವ ನಗೆಯನ್ನು ತಡೆಯುತ್ತಲೆ ಹೇಳಿದ. “ ಜನಸಮುದಾಯ ಅಂದ್ರೆ ಬಹಳೇ ವಿಚಿತ್ರ! ಬೀದಿಯ ಮೇಲೆ ಈ ಡೊಣ್ಣೆಯ ಹಾರಾಟ ನಡೆದಿದೆ, ಜನ ಕಂಗೆಟ್ಟು ಓಡುತ್ತಿದ್ದಾರೆ, ಆಗ ಬದಿಯ ಮನೆಯಲ್ಲಿ ಮೇಲಿನ

ಮಹಡಿಯಿಂದ ಒಬ್ಬ ಹೆಂಗಸು ಒಂದು ಚಪ್ಪಲಿಯನ್ನು ಒಗೆದಳು. ಸಾರ್ಜಂಟನ ತಲೆಗೆ ಬಡಿದು ಅವನ ಟೋಪಿ ಉರುಳಿತು. ಓಡುವ ಜನ ತಡೆದು ನಿಂತು ಹೋ ಎಂದು ನಕ್ಕಿತು!"

ಹಮ್ಯಾನೂ ನಕ್ಕ. "ಆ ಹೆಂಗಸಿಗಾದರೂ ಧೈರ್ಯವಿತ್ತು ಅನ್ನು" ಎಂದ.

ಮಾಧವ ತಲೆ ಅಲ್ಲಾಡಿಸಿದ. "ಹಾಗಲ್ಲ, ಹಮ್ಯಾ, ಜನ ಓಡುವುದನ್ನು ತಡೆದು ನಕ್ಕಿತು ಎಂದರೆ, ಜನರಲ್ಲಿ ಧೈರ್ಯವಿದೆ, ಆದರೆ ಶಿಸ್ತು ಇಲ್ಲದ್ದಕ್ಕೆ ಓಡುವರು—ಎಂದು ನನ್ನ ಅಭಿಪ್ರಾಯ." ಎಂದನು.

"ಸರ್ವಾನುಮತದಿಂದ ಸ್ವೀಕೃತವಾಯಿತು" ಎಂದು ಹಮ್ಯಾ ನಗೆಯಾಡಿದ.

. . . .

ಹಮ್ಯಾ ತಲೆ ಜಾಡಿಸಿದ. ಯಾವ ಮಾತು? ಯಾವ ವಿಚಾರ ನಡೆಸಿರುವೆ ನಾನು? ಹದಿನೇಳು ವರ್ಷಗಳ ಹಿಂದಿನ ಮಾತು! ಅವನ್ನೇನು ಮಾಡುವುದೀಗ? ಇಂದು ಸ್ವಾತಂತ್ರ್ಯ ಸಿಕ್ಕಿತು ಕೂಡ, ಯಾರು ದಿಲ್ಲಿಯ ಘಟನಾಸಮಿತಿಯೊಳಗೆ ಸೇರಿಕೊಂಡಿದ್ದಾರೊ ಅವರಿಗೆ! ನಮ್ಮ ಪಾಲಿಗೆ ಸ್ವಾರ್ಥತ್ಯಾಗ! ಅದೂ ತಪ್ಪು ಈ ಹದಿನೇಳು ವರುಷಗಳೊಳಗೆ ಸ್ವಾರ್ಥ ಅನ್ನೋದಾದರೂ ಎಲ್ಲಿ ಉಳಿದಿದೆ ತ್ಯಾಗ ಮಾಡಲಿಕ್ಕೆ? ಅದೇ ಪುಣ್ಯಾತ್ಮ ಮಾಧೂ ಇದ್ದಾನಲ್ಲ? ಕೊನೆಗೆ ಸಿಕ್ಕಿಸಿಬಿಟ್ಟ ಪೇಚಿನೊಳಗ? ಉಪ್ಪಿನ ಸತ್ಯಾಗ್ರಹ ಅಂತ ಆಟ ಹೂಡಿದ ನಮ್ಮನ್ನು ಊರಿಗೆ ಕರೆದುಕೊಂಡು ಹೋಗಿ....ಹಹ!....ಹಾವುಗಾರ ಆಟ ಮಾಡಿಧಾಂಗ.... ಬುಟ್ಟಿಯೊಳಗ ಉಪ್ಪು ಇಟ್ಟುಕೊಂಡು ಊರೂರಿಗೆ ಹೋಗೋದು, ಸಭಾ ಮಾಡೋದು, ಬುಟ್ಟಿ ಬಿಚ್ಚೋದು, "ಉಪ್ಪುಕಾರಕೀ ಜೈ!" ಅನ್ನೋದು, ಮುಂದಿನ ಊರಿಗೆ ಹೋಗೋದು! ಕಾರ್ಯ ಇಲ್ಲ, ಕ್ರಮ ಇಲ್ಲ! ಇಂದಿಗೂ ಹೀಗೇ ಈ ಕಾಂಗ್ರೆಸದೊಳಗೆ. ಚಳವಳಿ ನಡೆದಾಗ ಮ್ಯಾಲಿನವರು ಎಲ್ಲಾರಿಗಿಂತ ಮುಂಚೆ ಜೇಲಿಗೆ ಹೋಗಿಬಿಡೋದು ...ಕೆಳಗಿನವರು ಮಾಡಬೇಕೇನು, ಹಾವುಗಾರ ಆಟದ ಹೊರತು? ಸರಕಾರದವರು ಬುದ್ಧಿ ಕಲಿತರು. ಮೊದಲಿನ

ಹಾಂಗ ಎಲ್ಲಾರಿಗೂ ಜೇಲಿಗೆ ಹಾಕಲಿಲ್ಲ; ಮ್ಯಾಲಿನವರನ್ನ ಹಿಡಿದು ಹಾಕೋದು, ಕೆಳಗಿನವರನ್ನ ಹೊಡೆದು ಹಾಕೋದು—ಲಾಠಿಯಿಂದ! ನಮ್ಮಂಥವರು ನಡುವಿನವರು. ಈ ಕಡೆ ಜೇಲು ಇಲ್ಲ, ಈ ಕಡೆ ಚಪ್ಪಾಳೆ ಇಲ್ಲ. ಆದರೆ ಜೇಲಿಗೆ ಹೋಗುವವರಿಗೂ ಚಪ್ಪಾಳೆ ಹೊಡೆಸಿಕೊಳ್ಳುವವರಿಗೂ ದುಡ್ಡು ಕೊಡುವವರು ನಾವು!....ಹಮ್ಮೂನಿಗೆ ಸಿಟ್ಟು ಬಂದಿತ್ತು. ತನ್ನ ವಿಚಾರಕ್ಕಾಗಿ ಕೈಯನ್ನು ಮುಂದಿದ್ದ ಮೇಜಿನ ಮೇಲೆ ಬಡೆದ, ಕಪ್ಪು-ಬಸಿ ಕುಣಿದಾಡಿದುವು. ಎಚ್ಚೆತ್ತವನಂತೆ ಅವನ್ನು ನೋಡಿ "ಇವಕ್ಕೂ ನಾವೇ ದುಡ್ಡು ಕೊಡೋದು ಬ್ಯಾಡ" ಎಂದು ಎತ್ತಿ ಎದ್ದು ನಡೆದು ಅವನ್ನ ಮಂಚದ ಕೆಳಗಿಟ್ಟ. ತಾನೂ ಅಲ್ಲಿಯೆ ಮಂಚದ ಮೇಲೆ ಕುಳಿತುಕೊಂಡ.... ಸರಕಾರದವರೇ ಬುದ್ಧಿ ಕಲಿತರು, ಆದರೆ ಕಾಂಗ್ರೆಸಿನವರಿಗೆ ಇಂದಿಗೂ ಬುದ್ಧಿ ಬರಲಿಲ್ಲ....ಈಗ ರಾಜ್ಯ ನಡೆಸೋದು; ಆದರೆ ಅದನ್ನೂ ಚಳವಳ ನಡೆಸಿ ಧಾಂಗೇ ನಡೆಸ್ತಾರೆ. ಮೊದಲು ಮ್ಯಾಲಿನವರ ವ್ಯವಸ್ಥಾ ಮಾಡೋದು, ಕೆಳಗಿನವರು ಹಾಳಾಗಿ ಹೋಗವಲ್ಲರ‍್ಯಾಕೆ....ಅಲ್ಲ—ಆ ಅನಂತಗ ದೊಡ್ಡ ಪಗಾರ ಕೊಡ್ತಾರ, ಚಳವಳಿ ಸೇರಿ ನಾವೇ ತಪ್ಪು ಮಾಡಿದೆವೇನೂ ಅಂತೀನಿ ....ಅನಂತ ಅಂದ್ರೆ ಹೇಳಿಕೇಳಿ "ಬದ್ಮಾಷ್" ಗಾಳಿ ಬಂಧಾಂಗ ತೂರಿ ಕೊಳ್ಳುವವ....ಆದರೆ ಯಾವ ಗಾಳಿ ಬಂದರೂ ಬರಿಯ ಅದನ್ನ ತಿಂದು ತಣ್ಣಗ ಕೂಡುವ ಹುಚ್ಚರು ನಾವೇ ಕಾಣ್ತದ....ಹುಂ....ಹಮ್ಮೂ ಹಾಸಿಗೆಯಿಂದೆದ್ದ. ಎಲ್ಲಿ ಹೋಗದಿದ್ದರೂ ಮಾಧೂನ ಕಡೆ ಒಂದು ಹೋಗಬೇಕಲ್ಲ—ಎಂದು ಕೊಂಡ....ಇನ್ನೊಮ್ಮೆ ದಿಲ್ಲಿಗೆ ಹೋಗಿಯೆ ಬರಬೇಕು ಎಂದುಕೊಂಡ.... ದಿಲ್ಲಿಗೆ ಹೋಗಬೇಕು, ಆ ವಲ್ಲಭಭಾಯಿಯ ಮೋರೆಯ ಮೇಲೆಯೆ ಹೇಳ ಬೇಕು. "ನಮ್ಮೂರಿಗೆ ಬಂದು ನೋಡು; ನಿನಗೆ ಹೆಚ್ಚು ವೋಟ್ ಬೀಳ್ತಾವೊ ಏನು ಈ ಹಮ್ಮೂಗೊ" ಅಂತ ಅನ್ನಿಸಿತು ಅವನಿಗೆ....ನಾಳೆ ಕರ್ನಾಟಕ ಬೇರೆ ಪ್ರಾಂತ ಆದರೆ ಇವರೇನು ಮಾಡ್ತಾರೆ ತಿಳೀತು!....ಇಲೆಕ್‌ಶನ್ ಮಾಡಿ ಸೋದೇ ಇಲ್ಲ, ಮ್ಯಾಲಿನಿಂದ ತುರುಕುತಾರೆ ತಮಗೆ ಬೇಕಾದವರನ್ನ!....ಛೆ! ನಾಚಿಕೆಗೇಡು! ನಾನು ಯಾಕೆ ಆ ಮಾಧೂನ ಮೋಸಕ್ಕೆ ಬಿದ್ದು ಈ ಕಾಂಗ್ರೆಸದ ಯಂತ್ರದೊಳಗ ಸಿಕ್ಕಿಕೊಂಡೆನೋ? ಹೊರಗ ಇದ್ದರೆ ಅನಂತನ ಹಾಗೆ, ಇಲ್ಲ ಅಂಬೇಡಕರನ ಹಾಗೆ ದೊಡ್ಡ ಮನುಷ್ಯ ಆಗ್ತಿದ್ದೆ....ಈಗ ಹದಿನೇಳು ವರ್ಷ ಪುಕ್ಕಟೆ ಹಾಳು ಮಾಡಿಕೊಂಡು ವಯಸ್ಸಿನಿಂದಲೂ ಸಣ್ಣ ಮನುಷ್ಯನೆ

ಆಗೀನಿ....ತಿರಸ್ಕಾರದಿಂದ ತನ್ನಷ್ಟಕ್ಕೇ ನಕ್ಕ ಹಮ್ಮೂ. ನಿರಾಶೆಯಿಂದ ತಲೆ ಜಾಡಿಸುತ್ತ ಮತ್ತೆ ಮಂಚದ ಮೇಲೆ ಕುಳಿತುಕೊಂಡ.

. . . . .

೨೪

ಮಾಧವ, ಹಮ್ಮೂ ಕೂಡಿಯೆ ಮುಂಬಯಿಯಿಂದ ಹಿಂದಿರುಗಿದರು. ದಾರಿಯುದ್ದ ಮಾಧವನ ಉಪನ್ಯಾಸ ಒಂದೇ ಸವನೆ ನಡೆದೇ ಇದೆ! ಈ ಸಂದರ್ಭದಲ್ಲಿ ನಾನು ಮಾಡಬೇಕಾದ್ದೇನು? ಊರಿಗೆ ಬಂದು ಮುಟ್ಟುವಷ್ಟರಲ್ಲಿ ಚಳವಳವು ದೇಶದ ತುಂಬ ವ್ಯಾಪಿಸಿತ್ತು. ಆ ವರ್ಷ ಕಟ್ಟಿಗೆಯ ವ್ಯಾಪಾರ ಬೆಳೆದಿರಬೇಕೇನೊ—ಎಂದು ಹಮ್ಮೂನ ತರ್ಕ. ಯಾಕೆಂದರೆ, ಲಾಠಿ ಪ್ರಯೋಗವು ದೇಶದ ತುಂಬ ದಿನದ ರೂಢಿಯಾಯಿತು. ಮಾಧವನು ದಿನ ದಿನಕ್ಕೆ ಮುನ್ನುಗ್ಗಿದನು ಚಳವಳದಲ್ಲಿ....ಹಮ್ಮೂನ ಸಂಕಟ ಹೆಚ್ಚಿತು.... ಮಾಧವನಿಗೆ ಚಳವಳದ ಹೊರತು ಗತಿಯೆ ಇಲ್ಲದಂತಾಗಿದೆ ಎಂದು ಭಾವಿಸಿದ್ದನು ಹಮ್ಮೂ. ಆದರೆ ತನ್ನ ಮಾತು ಬೇರೆ. ತನಗೆ ಮನೆ ಇದೆ, ಸಂಸಾರ ಇದೆ, ಜವಾಬ್ದಾರಿ ಇದೆ. ತಕ್ಕಮಟ್ಟಿಗೆ ವಕೀಲನೂ ಆಗಿದ್ದಾನೆ, ಮೇಲಿಂದ ಮೇಲೆ ಪುಣೆ–ಮುಂಬಯಿಗೆ ಹೋಗಿ ಬರುವವನಾದ್ದರಿಂದ ದೊಡ್ಡ ವಕೀಲನಿರಬಹುದು ಎಂದು ಪಕ್ಷಗಾರರು ತನ್ನ ಕಡೆ ಬರುತ್ತಾರೆ; ಇಂತಹದರಲ್ಲಿ ಮಾಧವನ ಬೆನ್ನು ಹತ್ತುವುದೆ?

“ ಆದರೆ, ಇನ್ನು ನೀನು ಚಳವಳದಲ್ಲಿ ಹೆಚ್ಚಾಗಿ ಭಾಗ ವಹಿಸಬೇಕು” ಒಂದು ದಿನ ಮಾಧವ ನುಡಿದನು.

“ ಗಾಕಪ! ನಾನು ನನ್ನಷ್ಟಕ್ಕ ತಣ್ಣಗ ಕೂತದ್ದು ನೋಡಿ ಸಹನ ಇಲ್ಲೇನು ನಿನಗ?” ಎಂದು ಹಮ್ಮೂ ನಕ್ಕನು.

“ ನಿನ್ನಷ್ಟಕ್ಕೆ! ಹಮ್ಮೂ, ನಿನ್ನ ವಿನೋದದ ಸ್ವಭಾವ ಎಂದು ಬದಲಾಗುವುದೊ? ಇಡಿಯ ದೇಶಕ್ಕೆ ದೇಶ ಹೆಡೆ ತುಳಿಸಿಕೊಂಡ ನಾಗರಹಾವಿನಂತೆ ಬುಸುಗುಡುತ್ತ ಎದ್ದಿರುವಾಗ—”

“ ನಾನೊಂದು ಮಣ್ಣುಮುಕ್ಕ ಹಾವು ಅಂತ ತಿಳಿ” ನಡುವೆಯೆ ಹಮ್ಮೂ ನಗೆಯಾಡಿದನು.

“ ದೇಶಕ್ಕಾಗಿ ಚಳವಳದಲ್ಲಿ ಸೇರುವುದು ಪ್ರತಿಯೊಬ್ಬನ ಕರ್ತವ್ಯ.”

" ಹಾಂ, ಹೀಗನ್ನು, ಮಾಧು ಆ ಮಾತು ಒಪ್ತೀನಿ ನಾನು. ಈಗ ನಾನು ಚಳವಳದೊಳಗ ಇಲ್ಲೇನು ? ನಿನ್ನ ಜೋಡಿ ಇದ್ದು ಚಳವಳ ತಪ್ಪಿಸಿ ಕೊಳ್ಳೋದು ಶಕ್ಯ ಆದ್ರೂ ಅದ ಏನು ? "

" ಅದಲ್ಲ ನಾನು ಹೇಳೋದು, ಹಮ್ಯಾ. ನಿನ್ನಂಥವ ಮುಂದಾಗ ಬೇಕು. "

" ಅಂದ್ರೇನು ? ನನಗೂ ಒಂದು ಸ್ವಂತದ್ದೇ ಜೇಲದ ಕೀಲಿಕೈ ಮಾಡಿ ಸಿಕ್ರೊ ಅಂತಿಯಾ, ಬೇಕಾದಾಗ ಹೋಗಲಿಕ್ಕೆ ಬೇಕಾದಾಗ ಬರಲಿಕ್ಕೆ ಅನುಕೂಲ ಆಗ್ತದ ಅಂತ. "

ಮಾಧವನ ಕೂಡ ವಾದಿಸಿದ ಹಮ್ಯಾ. ಚಳವಳ ಯೋಗ್ಯ, ಆದರೆ ಅದರ ಸಂಘಟನೆ ತಪ್ಪು ಎಂದು ಹಮ್ಯಾನ ವಾದ. ಚಳವಳ ಅಂದ್ರೇನು ? ಬರಿಯ ಜೇಲಿಗೆ ಹೋಗೋದು ? ಎಲ್ಲಾರೂ ಜೇಲಿಗೇ ಹೋದ್ರೆ ಯಾರೇನು ಸಾಧಿಸಿಧಾಂಗ ಆಯ್ತು ? ಅದು ತಪ್ಪು. ಒಬ್ಬರಾದರೂ ಅಂದ್ರೆ ಕೆಲವ ರಾದ್ರೂ ಹಿಂದೆ, ಹೊರಗ ಉಳಿಯಲೇಬೇಕು.

" ಇಂದಿನ ಪರಿಸ್ಥಿತಿ ನೋಡಿ ಹೆಂಗಸರು ಕೂಡ ಹೊರಗೆ ಉಳಿದಿಲ್ಲ" ಎಂದ ಮಾಧವ.

ಆ ಮಾತನ್ನು ಹಮ್ಯಾ ಒಪ್ಪಿದ. ಇಷ್ಟೇಕೆ ? ಗಾಂಧಿ ಈ ಮಾತಿಗಾಗಿ ಈ ಸಲ ನಿಜವಾದ ಜಾಣತನ ತೋರಿಸಿದ ಅಂತ ಹೇಳಬಹುದು. ಹೆಂಗಸರು ಅಂದ್ರೆ ಹೇಡಿತನದ ಮಾದರಿ ಅಂತ ಜನ ತಿಳೀತಾರೆ. ಆದ್ರೆ ಹೆಂಗಸರೇ ಜೇಲಿಗೆ ಹೋಗಲಿಕ್ಕೆ ತಯಾರಿದ್ದಾರೆ ಅಂದಮ್ಯಾಲೆ ಗಂಡಸರು ಹ್ಯಾಗೆ ಇದ್ದಿರಬೇಕು ನೋಡಿರಿ ಅಂತ ಹೆದರಿಕೆ ಹಾಕಿಧಾಂಗ ಆಯಿತು ಬ್ರಿಟಿಶರಿಗೆ.

ಮಾಧವನು ನಕ್ಕನು. " ಹೆಂಗಸರು ಏನೇ ಇರಲಿ, ಗಂಡಸು ಬುದ್ಧಿ ವಂತ ಅಂತ ತೋರಿಸಿಕೊಡತಾ ಇದ್ದಿ ನೀ. " ಹಮ್ಯಾ ತುಸು ಕೆರಳಿದ. " ಮಾಧೂ, ನಾನು ಹಿಂಜರಿದು ಹೀಗೆ ಮಾತಾಡ್ತೀನಿ ಅಂತ ತಿಳಿದಿದ್ದರೆ ತಪ್ಪು ಅದು. ಜೇಲಿಗೆ ಹೋಗೋದೇ ಆದ್ರೆ ಈಗಲೆ ಬರ್ತೀನಿ ನಡೆ ನಾನು. ಆದರೆ ಏನಾದರೂ ವಿಚಾರ ಮಾಡಬೇಕೋ ಇಲ್ಲೋ ? ಈಗ ನಾ ಜೇಲಿಗೆ ಹೋದರೆ ಎಷ್ಟು ಅನವಸ್ಥಾ ಆಗ್ತದೆ ನೋಡು. ನಿನ್ನ ಸಲುವಾಗಿ ಮಂದೀನ್ನ

ಕೂಡಿಸ್ತೀನಿ. ಸಿಂ ಪತ್ರವ್ಯವಹಾರ ನಡೆಸ್ತೀನಿ. ಪ್ರಸಂಗ ಬಿದ್ದಾಗ ಮುಡ್ಡಿ ಕಡವೆ ಬೀಳಧಾಂಗ ನೋಡಿಕೋತೀನಿ—"

"ನೀನು ಮಾಡೋದಿಲ್ಲ ಅಂತ ಯಾರಂದಾರೆ" ತುಸು ಆವೇಶ ದಿಂದಲೆ ನುಡಿದ ಮಾಧವ.

"ಯಾರು ಅನ್ನೋದೇನು? ಈಗ ಇವನ್ನೆಲ್ಲ ಬಿಟ್ಟು ನನಗೂ ಜೇಲಿಗೆ ನಡೆ ಅಂತೀಯಲ್ಲ?"

. . . . . .

ಹನ್ಮ್ಯಾನು ಮಂಚದಿಂದೆದ್ದ. ಗಡಿಯಾರ ನೋಡಿದ....ಇದೆಲ್ಲ ನೆನೆದುಕೊಂಡು ಈಗ ಏನು ಉಪಯೋಗ–ಎಂದುಕೊಂಡ. ನಿರಾಶೆಯಿಂದ ಉಸುರ್ಗರೆದ. ಅಹುದು–ಏನು ಉಪಯೋಗ–ಎನ್ನುತ್ತ ಮೈಮುರಿದು ಆಕಳಿಸಿದ. ಹಂ....ಆದರೂ ಒಂದು ದೃಷ್ಟಿಯಿಂದ ಇದೆ ಇದರ ಉಪಯೋಗ. ಬುದ್ಧಿ ಕಲಿಯಲಿಕ್ಕೆ....ಹೆಂ.!....ನಲವತ್ತು ಮೀರಿತು ವಯಸ್ಸು, ಇನ್ನು ಬುದ್ಧಿ ಕಲಿತು ಉಪಯೋಗವೇನು, ಕಲಿತ ಬುದ್ಧಿ ಉಪಯೋಗ ಮಾಡುವ ತನಕ ಜೀವದಿಂದಾದರೂ ಇರ್ತೀನೊ ಇಲ್ಲೊ—ಎಂದು ಒಳಗಿಂದೊಳಗೆಯೆ ತಿರಸ್ಕಾರದಿಂದ ನಕ್ಕ ...ಈಗ ದಿಲ್ಲಿಯೊಳಗೆ ಮೋಜು ನಡೆದಿರಬೇಕು!....ಅಧಿಕಾರ ಸ್ವೀಕಾರ! ಹಹ!....ನನ್ನ ಕಡೆಯಿಂದ ಹೋದ ಕುಳಗಳೆಲ್ಲ 'ಅಧಿಕಾರ ಮುಟ್ಟಿತು' ಅಂತ ಪಾವತಿಗೆ ಹೆಬ್ಬೊಟ್ಟಿನ ಗುರುತು ಒತ್ತುತ್ತಿರಬಹುದು! ಹಹಹ!....ನನ್ನೊಬ್ಬನ್ನ ಬಿಟ್ಟು ಎಲ್ಲಾರನ್ನೂ ಆರಿಸಿಧಾಂಗ ಕಾಣಿಸ್ತದ.... ಸ್ವರಾಜ್ಯ ಸಿಕ್ಕ ಮ್ಯಾಲೆ ನಮ್ಮ ಕೆಲಸ ಏನು?....ಮುಂಬಯಿ ಶಾಸನಸಭಾದೊಳಗ ಕೈ ಎತ್ತೋದು, ದಿಲ್ಲಿಯೊಳಗ ಕೂತ ಪಂಡಿತರು ಹೇಳಿದ್ದಕ್ಕ!.... ಇಷ್ಟರ ಸಲುವಾಗಿ ನನಗ ಕೆಟ್ಟ ಅನ್ನಿಸೋದು ಚಳವಳಿಯೊಳಗ ಸೇರಿದ್ದಕ್ಕ.... ಮ್ಯಾಲೆ ಗಾಂಧಿ ಮಹಾತ್ಮನದು ಉಪದೇಶ ಒಂದು! ಕಾಂಗ್ರೆಸದವರು ಅಧಿಕಾರ ಜಾಗೆಯ ಆಶಾ ಹಿಡಿಯಬಾರದು ಅಂತ....ಅಂದ್ರೆ? ನಮ್ಮಂಥವರು ಮಾಡ್ಬೇಕೇನು! ಇತ್ತ ಚಳವಳೀನೂ ಇಲ್ಲ, ಇತ್ತ ಅಧಿಕಾರನೂ ಇಲ್ಲ, ಆಶಾ ಹಿಡಿಯೋದರ ಹೊರತು ನಮಗೆ ಬೇರೆ ಕೆಲಸ ಆದ್ರೂ ಏನಿದೆ?....ಹನ್ಮ್ಯಾನು ಕೆಲಸವನ್ನು ಹುಡುಕುವವನಂತೆ ಕಿಟಕಿಗೆ ನಡೆದನು. ಒಂದೆರಡು ನಿಮಿಷ ಸುಮ್ಮನಿದ್ದು ಹೊರಗೆ ಸುತ್ತಲೂ ನೊಡಿದನು....ಒಮ್ಮೆಲೆ ಖೊಳ್ಳನೆ ನಕ್ಕನು....ಚಕ್ರ! ಅಶೋಕನ ಚಕ್ರ! ಹೊಸ

ಧ್ವಜದೊಳಗೆ ಚರಖಾದ ಬದಲು ಚಕ್ರ ಬಂದದ್ದು ಯೋಗ್ಯ ಆಯಿತು ... ಚರಖಾಮುಂದಿಗೆ ಕೊಟ್ಟರು ಚಕ್ರ ! ಹಹಹ !....ಕಿಟಿಕಿಯಿಂದ ಹಿಂತಿರುಗಿದ....ನಮ್ಮದೆ ಒಂತುಸಾ ಹುಚ್ಚತನ ಆಯ್ತು ಎಂದುಕೊಂಡ. ಶಾಸನ ಸಭಾದ ಚುನಾವಣೆ ನಡೆದಾಗ ಇದೇ ನಮ್ಮ ಅಧಿಕಾರದ ಛತ್ರ ಅಂತ ಅದಕಾಗಿಯೆ ಹೊಡೆದಾಡಿದುವು; ಈಗ ಪ್ಯಾಲಿನವರು ಚಲೊ ಏಟು ಕೊಟ್ಟರು ಅದೇ ಛತ್ರಿಯಿಂದ ನಮಗ ! ಕೂಡಿರಿ ಶಾಸನಸಭಾದಾಗ ಅಂದರು....ಯಾರು ಗವರ್ನರ ಆಗತಾರ, ಯಾರು ವಿದೇಶದ ರಾಯಭಾರಿ ಆಗ್ತಾರ, ಯಾರು ಕಾನ್‌ಸ್ಟಿಟುಎಂಟ್ ಅಸೆಂಬ್ಲಿ ಉರ್ಫ ಮೊದಲನೆಯ ಸ್ವತಂತ್ರ ಪಾರ್ಲಮೆಂಟದ ಮೆಂಬರ ಆಗ್ತಾರ, ಯಾರ್‍ಯಾರು ಏನೇನೊ ಆಗ್ತಾರ; ಆದರೆ ಹಳ್ಳಿಯ ಹನುಮಂತಗೌಡ ಮಾತ್ರ ಸ್ಟೇಶನ ಪ್ಲಾಟ್ ಫಾರ್ಮದ ಪ್ಯಾಲಿದ್ದ ಚಿತ್ರದ ಗೊಂಬೆಯ ಹಾಗೆ ಕೈ ಎತ್ತಿಕೊಂಡು ಕೂತುಬಿಡೋದು. ಈ ಕಡೆ ಊರು–ಕೇರಿ–ವಕೀಲಿ ಇದೆಲ್ಲ ತಪ್ಪಿತು, ಈ ಕಡೆ ಮಂತ್ರಿ–ಗವರ್ನರ ಪದವಿ ತಪ್ಪಿತು....ಪುಣೇನೊ ಮುಂಬಯಿನೊ ಹಿಡಿದುಕೊಂಡು ಖಾನಾವಳಿಯ ರೇಶನ್ ರಾಡಿ ತಿನ್ನಕೋತ ಕೂಡೋದು. ಥೂ! ಸಿಟ್ಟಿನಿಂದ ಕಾಲನ್ನಪ್ಪಳಿಸಿದ ಹಮ್ಯಾ. ಮೇಜಿನ ಕಡೆ ನಡೆದ....ಅದರ ಮೇಲಿದ್ದ ಕಾಗದಗಳನ್ನು ಸಾವರಿಸತೊಡಗಿದ....ಸುಮ್ಮನೆ ತಿರುಗಿ ಊರಿಗೆ ಹೋಗಿ ಬಿಡೋಣ ನೆಟ್ಟಗೆ ಅಂದ.. ಆದರೆ, ಅಲ್ಲಿಗ್ಯಾದರೂ ಏನು ಸುಖ ? ತಾನು ಕಾಂಗ್ರೆಸದ ಮುಂದಾಳು ಅಂತ ಊರವರ ಕಲ್ಪನಾ....ಊರಿಗೆ ಮುಟ್ಟೋದೊಂದೇ ತಡ ರೇಶನ್ ಅಂಗಡಿ ಮುಂದಿದ್ದುವದಕ್ಕಿಂತ ಹೆಚ್ಚಿನ ಗದ್ದಲ ತನ್ನ ಮನೆಯ ಮುಂದೆ ಅರ್ಜಿ ಹಿಡಿದುಕೊಂಡ ಬಂದ ಜನರದು ! ಕಾಂಗ್ರೆಸದ ಮುಂದಾಳು....ಹಃ !—ಈಗ ಕಾಂಗ್ರೆಸದ ಮುಂದ ಅತ್ತರೂ ಯಾರು ಕೇಳೋದಿಲ್ಲ....ಮೊದಲು ಅದರೊಳಗೆ ಸೇರಿಕೊಂಡಿದ್ದೇ ತಪ್ಪು !...ಅದು ಆ ಮಹಾರಾಯ ಮಾಧೂ ಮಾಡಿದ ಮಂಗತನ....

. . . . .

"ಯಾಕೊ, ಮಾಧೂ, ನಿನಗೆ ಜೇಲಿನೊಳಗ ಜೋಡಿ ಬೇಕಾಗಿದೆ ಏನು ? ಒಬ್ಬಗೇ ಹೊತ್ತು ಹೋಗೋದಿಲ್ಲ ಅಂತ ನನ್ನೂ ಹೊತ್ತುಕೊಂಡು ನಡೀಬೇಕಂತಿ—ಆಂ ?" ಎಂದನು ಹಮ್ಯಾ.

ಅಂದು ೧೯೩೦ರ ಮೇ ೪ನೆಯ ತಾರೀಕು. ಮಾಧವನು ಅತ್ಯಂತ ಗಂಭೀರ ಮುದ್ರೆಯಿಂದ ತನ್ನ ಕಡೆ ಬಂದಿದ್ದನು. ತಾನು ಕೂಡಲೆ ಚಳವಳ ದಲ್ಲಿ ಭಾಗ ವಹಿಸಲೇಬೇಕು ಎಂದು ಅತ್ಯಂತ ಹಟದಿಂದ ಬೇಡಿದನು. ಅದಕ್ಕೆ ತಾನು—ಹಮ್ಮೂ—ಹಾಗೆ ನಗೆಯಾಡಿದ್ದು.

ಆದರೆ ಮಾಧವನ ಮುಖದ ಕಳೆ ಬದಲಾಯಿಸಲಿಲ್ಲ.

"ಹಮ್ಮೂ, ನಿನ್ನಿನ ವರೆಗೆ ನಾನು ಎಂದಿಗೂ ನಿನ್ನನ್ನು ಒತ್ತಾಯ ಪಡಿಸಲಿಲ್ಲ. ಆದರೆ ನಿನ್ನಿನಿಂದ ಪರಿಸ್ಥಿತಿಯೆ ಬದಲಾಗಿದೆ, ನಿನ್ನಿನ ದಿನ ಮಹಾತ್ಮರನ್ನು ಬಂಧಿಸಿ ಸರಕಾರವು ನಮಗೆ ಆಹ್ವಾನ ಕೊಟ್ಟಿದೆ. ಗಾಂಧಿಜಿ ಯವರು ನಮ್ಮ ಕಣ್ಮರೆಯಾದರೆ ನಮ್ಮ ಕೈ ಸೋಲುವುದು ಎಂದು ತಿಳಿದಿದೆ ಸರಕಾರ. ಆದ್ದರಿಂದ ಇಂದಿನಿಂದ ಪ್ರತಿಯೊಬ್ಬನೂ ಚಳವಳದಲ್ಲಿ ಧುಮುಕ ಬೇಕು. ಯಾವನು ಹೊರಗುಳಿಯುವನೊ ಅವನು ದೇಶದ್ರೋಹಿ, ದೇಶದ ಶತ್ರು—"

"ಹಾಂ, ತಡೆ, ಮಾಧೂ" ಎಂದ ಹಮ್ಮೂ. ಮಾಧವನ ಮೈ ನಡಗುತ್ತಿದ್ದಿತು. ಉದ್ವೇಗವನ್ನು ತಡೆದುದಕ್ಕಾಗಿ ಮುಖವೆಲ್ಲ ಉಬ್ಬಿದಂತಾಗಿ ಕೆಂಪೇರಿತ್ತು. ಕಣ್ಣುಗಳಿಗೆ ನಿದ್ರೆ ಇದ್ದಿರಲಿಲ್ಲ ಎಂಬುದು ಸ್ಪಷ್ಟವಾಗುತ್ತಿತ್ತು. ಹಮ್ಮೂನಿಗೆ ಗೆಳೆಯನನ್ನು ನೋಡಿ ಆಶ್ಚರ್ಯವಾಯಿತು. ೨–೩ ಸಲ ವಾದರೂ ಜೇಲಿಗೆ ಹೋಗಿದ್ದಾನೆ ಈತ. ಆದರೂ ಇವನ ಭಾವನೆಯ ಆವೇಶ ಕಡಮೆಯಾಗಿಲ್ಲ. ಮನೆ–ಮಾರಿನ, ಊಟ–ನಿದ್ರೆಯ ಪರಿವೆ ಇಲ್ಲ; ಹೆಂಡತಿ ಯನ್ನು ಕಳೆದುಕೊಂಡಿದ್ದಾನೆ, ಹುಡುಗನೊಬ್ಬ ಶ್ರೀಧರನ ಕಡೆ ಇದ್ದಾನೆ, ತಾನು ಈ ಪರಿ ಕಷ್ಟಪಡುತ್ತಾನೆ! ಯಾಕೆ? ಮುಂಚೆ ಒಮ್ಮೆ ಎಲ್ಲವನ್ನೂ ಕಳೆದುಕೊಂಡುದಕ್ಕಾಗಿ ಈಗ ಬೇರೆ ಉಪಾಯವಿಲ್ಲ ಎಂಬುದಕ್ಕಾಗಿ ಈ 'ಬೇಫಿಕೀರ' ವೃತ್ತಿಯೆ? ಇಲ್ಲವೆ, ಮಹಾತ್ಮರಲ್ಲಿ ಸಂಪೂರ್ಣ ಶ್ರದ್ಧೆ ಯನ್ನಿಟ್ಟು ತನ್ನ ವ್ಯಕ್ತಿತ್ವವನ್ನು ಬಿಟ್ಟು ಬೇಕಾದ್ದಕ್ಕೆ ಸಿದ್ಧ ಎನ್ನುವ ಸರಳ ವೃತ್ತಿಯೆ? ಇಲ್ಲವೆ ವಯಸ್ಸಿಗೆ ಸಹಜವಾದ ಕಿಡಿಗೇಡಿತನಕ್ಕಾಗಿ ಎಲ್ಲಿ ಹೆಚ್ಚಿನ ತೊಂದರೆ ಅಲ್ಲಿ ಧುಮುಕಬೇಕೆಂಬ ಉಡಾಳ ವೃತ್ತಿಯೋ? ಹಮ್ಮೂನು ಎಲ್ಲ ತರವನ್ನೂ ನೋಡಿದ್ದಾನೆ. ಉಡಾಳವೃತ್ತಿಯವರೆ ನೂರಕ್ಕೆ ತೊಂಭತ್ತು ಜನ ಎಂದು ತಿಳಿದುಕೊಂಡಿದ್ದಾನೆ. ಆದರೆ ಇಂದು ಮಾಧವನ

ದನಿಯನ್ನೂ ಮುಖಮುದ್ರೆಯನ್ನೂ ನೋಡಿ ಬೆರಗಾಗಿದ್ದಾನೆ. ಮಾಧವನು ಉಡಾಳನಲ್ಲ, ಖಂಡಿತ, ಎಂದುಕೊಂಡನು; ಎಲ್ಲ ಕಳೆದುಕೊಂಡು ದಿಕ್ಕು ಗಾಣದ ಸ್ವೈರವೃತ್ತಿಯೂ ಕಾಣುವುದಿಲ್ಲ....ಹಮ್ಮೂನು ಗೆಳೆಯನನ್ನು ಬಿಟ್ಟಸಿದ, ಕ್ರಮೇಣ ಗೆಳೆಯನಿಗಾಗಿ ಒಂದು ತರದ ಆದರಭಾವ ಹುಟ್ಟಿತು ತನ್ನಲ್ಲಿ....ಏನು ಮಾತಾಡಬೇಕೆಂಬುದು ತಿಳಿಯದಂತಾಯ್ತು. ಹೆದರಿದವ ನಂತೆ ಮೆಲ್ಲನೆ ತನ್ನ ಬಲಗೈಯಿಂದ ಮಾಧವನ ಬಲಗೈಯನ್ನು ಹಿಡಿದನು; ಮುಷ್ಟಿಯಲ್ಲಿ ಮುಷ್ಟಿ ಬಿಗಿಯಿತು. ಮಾತಿನಿಂದ ವ್ಯಕ್ತಮಾಡಲು ಅಶಕ್ಯ ವಾದುದು ಅದೊಂದು ಕೈಕುಲಿಕಿನಿಂದ ವ್ಯಕ್ತವಾಯಿತು. ಮಾಧವನ ಮುಖ ಅರಳಿತು. ತಡೆದುಕೊಂಡ ಉದ್ವೇಗ ಕಣ್ಣೀರಾಗಿ ಉದುರಿತು.

"ಹಮ್ಮೂ, ಹಮ್ಮೂ, ನಿಜವಾಗಿ? ಒಪ್ಪಿದೆಯಾ? ಹಮ್ಮೂ!" ಎಂದು ಮುಷ್ಟಿಯಲ್ಲಿ ತನ್ನ ಕೈಯನ್ನು ಬಿಗಿಹಿಡಿದನು.

"ಮಾಧೂ, ನಿಜವಾಗಿ. ಮತ್ತು, ಸ್ವಸಂತೋಷದಿಂದ" ಎಂದು ಹಮ್ಮೂ ನಕ್ಕನು.

ಮಾಧವನಿಗೆ ವಿಶ್ವಾಸ ಹುಟ್ಟಲಿಲ್ಲವೆ? ಒಂದು ನಿಮಿಷ ಕನಸನ್ನು ಕಾಣುವವನಂತೆ ತನ್ನ ಕಡೆ ನೋಡಿದನು. ಹಮ್ಮೂನು ಬಹಳೊತ್ತು ತಡೆಯಲಿಲ್ಲ.

"ಮಾಧೂ, ನೀನು ಯಾವ ಕೆಲಸ ಒಪ್ಪಿಸುವೆಯೊ ಆ ಕೆಲಸಕ್ಕೆ ಸಿದ್ಧ" ಎಂದನು ಹಮ್ಮೂ.

ಮಾಧವನ ಉತ್ತರಗಳನ್ನು ಕೇಳಿ ಹಮ್ಮೂನಿಗೆ ಆಶ್ಚರ್ಯವಾಯಿತು; ಒಂದು ನಿಮಿಷ ಅವಮಾನವಾದಂತಾಯಿತು, ಮರುಗಳಿಗೆಯಲ್ಲಿ ನಿರಾಶೆ ಯಾಯಿತು. ಇಂತಹ ಮಹತ್ತ್ವದ ಪ್ರಸಂಗದಲ್ಲಿ ತಾನು ಧೈರ್ಯದಿಂದ ಮುಂದೆ ಬಂದುದಕ್ಕಾಗಿ ತನಗೆ ಮಹತ್ತ್ವದ, ಇಲ್ಲವೆ ಕಠಿಣ ಕೆಲಸವನ್ನು ಒಪ್ಪಿಸಬಹುದೆಂದು ಹಮ್ಮೂ ಎಣಿಸಿದ್ದ. ಆದರೆ ಮಾಧವನು, "ಹಮ್ಮೂ, ನೀನು ಸಿದ್ಧನಿರುವೆ ಎಂಬುದಕ್ಕೇ ಸಂತೋಷ. ಯಾವ ಕೆಲಸ ಎಂಬುದನ್ನು ಮೇಲೆ ನೋಡೋಣವಂತೆ" ಎಂದು ಉತ್ತರ ಕೊಟ್ಟ.

. . . .

೨೫

ಮೇಜಿನ ಮೇಲಿನ ಕಾಗದಗಳನ್ನು ಸಾವರಿಸದೆ ಬಿಟ್ಟು ಹಾಗೇ ಚಿಕ್ಕಿದ. "ಯಾವ ಕೆಲಸ ಎಂಬುದನ್ನು ಆ ಮೇಲೆ ನೋಡೋಣವಂತೆ" ಎಂದು ಮಾಧವನು ಹದಿನೇಳು ವರುಷಗಳ ಮುಂಚೆ ನುಡಿದದ್ದನ್ನು ಈಗ ಹಮ್ಮೊ ಮತ್ತೆ ನೆನೆದುಕೊಂಡ. ಆಗ ಮಾಧವ ೬-೫ ತಿಂಗಳ ವರೆಗೆ ಯಾವ ಕೆಲಸ ವನ್ನೂ ಒಪ್ಪಿಸಿರಲಿಲ್ಲ. ಆಗ ಆಶ್ಚರ್ಯವಾಗಿದ್ದಿತು ತನಗೆ. ಈಗ—ಹದಿ ನೇಳು ವರ್ಷಗಳ ಅನುಭವದ ನಂತರ—ಹಮ್ಮೊನಿಗೆ ಆಶ್ಚರ್ಯವೆನ್ನಿಸಲಿಲ್ಲ. ಮನುಷ್ಯ ಸ್ವಭಾವ ಎನ್ನಿರಿ, ಕಾಂಗ್ರೆಸದವರ ಮನೋವೃತ್ತಿ ಎನ್ನಿರಿ—ಹೊಸ ತಾಗಿ ಬಂದವನಿಗೆ ತನಗಿಂತ ಮುಂದೆ ಹೋಗಗೊಡಬಾರದು ಅನ್ನೋ ಧೋರಣೆ ಇದ್ದೇ ಇದೆ. ಅಂದು ಮಾಧವ ಶಿರ್ಶಿ–ಸಿದ್ದಾಪೂರ–ಅಂಕೋಲೆ ತಾಲೂಕಗಳಿಗೆ ಹೋದ. ಕರನಿರಾಕರಣೆಯು ಚಳವಳ ಸಾಘಟಿಸಿದ, ಮುಂದೆ ಬಂದ, ಮುಂದಾಳು ಎನ್ನಿಸಿಕೊಂಡ. ಆದರೆ ತನ್ನನ್ನು ಮಾತ್ರ ಅಲ್ಲಿಗೆ ಕರೆದು ಕೊಂಡು ಹೋಗಿರಲಿಲ್ಲ. ಕೇಳಿದಾಗೊಮ್ಮೆ ನಕ್ಕು "ನಿನ್ನದೂ ಪಾಳಿ ಬಂದೇ ಬರೋದು, ಅವಸರ ಮಾಡಬೇಡ" ಅನ್ನುವ....ಅವನದಾದರೂ ತಪ್ಪೇನು? ....ಈಗಲೂ ಮಾಡೋದಿಲ್ಲ?....ನಮ್ಮನ್ನ ಆ ಕಮಿಟಿ ವಳಗ ಹಾಕಿರಿ ಅಂದ್ರೆ "ಅವಸರ ಮಾಡಬೇಡ, ನಿನ್ನದೂ ಪಾಳಿ ಬರೋದು" ಅಂತಾರೆ....ಆ ಪಾಳಿ ಬರುವದೊ, ಏನು ಮುಂದಿನ ಇಲೆಕ್‌ಶನ್ನದ ಪಾಳಿನೇ ಮೊದಲು ಬರೋದೊ! ....ಹಮ್ಮೊ ಮೇಜನ್ನು ಕೈಯಿಂದ ಬಡೆದ. ಅವನಿಗೆ ಸಿಟ್ಟು ಬಂದಿತ್ತು. ಮತ್ತಾರ ಮೇಲೂ ಇಲ್ಲ, ತನ್ನ ಮೇಲೆಯೆ ಸಿಟ್ಟು....ಈ ಹೊತ್ತು ಉಳಿದ ಎಲ್ಲ ಕೆಲಸಕ್ಕೆ ನಿರುಪಯೋಗಿ ಆದೆ, ಯಾವ ಕೆಲಸಕ್ಕೆ ನನ್ನ ಉಪಯೋಗ ಆಗಬಹುದೊ—ಅಲ್ಲಿಯೆ ಅವಕಾಶ ದೊರೆಯೋದಿಲ್ಲ! ಯಾರದು ತಪ್ಪು? ಅರ್ಥಾತ್, ನನ್ನದು! "ನಿನ್ನದು—ನಿನ್ನದು ತಪ್ಪು" ಎಂದ ಮೇಜಿನ ಮೇಲಿದ್ದ ಕನ್ನಡಿಯೊಳಗಿನ ತನ್ನ ಪತ್ರಬಿಂಬಕ್ಕೆ. ಕಾಂಗ್ರೆಸದೊಳಗೆ ಕೆಟ್ಟ ಜನ ಸೇರಿದರು ಅಂತಾರೆ, ಅದು ತಪ್ಪು; ನಿಜವಾಗಿ, ಕಾಂಗ್ರೆಸ ಸೇರಿ ಜನ ಕೆಟ್ಟರು....ಹಮ್ಮೊ ತಲೆ ಜಾಡಿಸಿದ....ಸಾಕಾಯಿತು, ಈಗ ಯಾಕೆ ಅದೆಲ್ಲ ಯೋಚನೆ? ಇವತ್ತು ಸ್ವಾತಂತ್ರ್ಯ ಅಂತೂ ಸಿಕ್ಕಿತು. ಇಂದಿನಿಂದ ನಾನು ಸ್ವತಂತ್ರ. ಶಾಸನಸಭಾ ಬಿಡಲಿಕ್ಕೆ, ಅದ್ಯಾಕೆ?—ಕಾಂಗ್ರೆಸ ಕೂಡಾ ಬಿಟ್ಟು

ಬಿಡಲಿಕ್ಕೆ ನಾನು ಸ್ವತಂತ್ರ....ಹಮ್ಮೂ ಗಡಿಯಾರವನ್ನು ನೋಡಿದ.... ಆರಕ್ಕೆ ಹದಿನೈದು ನಿಮಿಷ....ಸರಿಯಾಗಿ ಆರೂವರೆ ಗಂಟೆಗೆ ಶ್ರೀಧರ-ಅನಂತರನ್ನು ಪ್ರಾರ್ಥನಾಸಮಾಜದ ಹತ್ತಿರ ಕೂಡಿಕೊಳ್ಳಬೇಕಾಗಿದೆ. ಶ್ರೀಧರ ಬರುವುದು ಪರೀಳದಿಂದ....ಹಮ್ಮೂನ ಮುಖದಲ್ಲಿ ಮುಗುಳ್ನಗೆ ಸುಳಿಯಿತು. ಶ್ರೀಧರ? ನಮ್ಮೆಲ್ಲರೊಳಗೆ ನಂಬರ ಒಂದು ಲುಚ್ಚಾ, ಅಂದರೆ ಶ್ರೀಧರ.... ಆಗ ಕಾಲೇಜ ಬಿಟ್ಟ, ಆದ್ರೂ ಕಾಂಗ್ರೆಸ ಸೇರಲಿಲ್ಲ; ನಾನು ಕಾಲೇಜ ಬಿಡಲಿಲ್ಲ, ಆದರೂ ಕಾಂಗ್ರೆಸದೊಳಗೆ ಸಿಕ್ಕಿಕೊಂಡೆ!

. . . .

೩-೪ ತಿಂಗಳ ವರೆಗೆ ಚಳವಳದಲ್ಲಿ ತಾನು ಯಾವ ಕೆಲಸ ಮಾಡಬೇಕು ಎನ್ನುವ ಕಲ್ಪನೆಯೆ ಹಮ್ಮೂನಿಗೆ ಆಗಿರಲಿಲ್ಲ. ಮಾಧವನ ಚಳವಳ ಉತ್ತರ ಕನ್ನಡ ಜಿಲ್ಲೆಯಲ್ಲಿ ಭರದಿಂದ ಸಾಗಿತು; ಎಷ್ಟೋ ಹೊಲ-ಮನೆ ಜಪ್ತಾದುವು, ದನ-ಕರು ಮಾರಲ್ಪಟ್ಟವು. ಇಡಿಯ ಹಿಂದುಸ್ತಾನದಲ್ಲಿ ಮಾಧವನ ಹೆಸರು ಕೇಳಬರುವ ಲಕ್ಷಣವಿದ್ದಿತು. ಹಮ್ಮೂನಿಗೆ ತನ್ನ ಗೆಳೆಯನ ಉತ್ಕರ್ಷವನ್ನು ನೋಡಿ ಆನಂದ; ಆದರೆ ತನ್ನನ್ನೂ ಕರೆದುಕೊಂಡು ಹೋಗಿದ್ದರೆ-?— ಎಂಬ ವಿಚಾರಕ್ಕಾಗಿ ಅಸಮಾಧಾನ. ಹಮ್ಮೂನಿಗೆ ತಡೆಯದಂತಾಯ್ತು. ಯಾವುದಾದರೂ ನಿಶ್ಚಿತವಾಗಬೇಕಲ್ಲವೆ? ಜೇಲಿಗೆ ಒಮ್ಮೆಯಾದರೂ ಹೋಗಿ ಬಾರದ ಹೊರತು ಚಳವಳದ ಸರ್ಟಿಫಿಕೇಟು ದೊರೆಯುವುದಿಲ್ಲ ಎಂಬುದು ನಿಶ್ಚಿತವಾಯಿತು ಹಮ್ಮೂನಿಗೆ. ಕೊನೆಗೆ ಡಿಸೆಂಬರ (೧೯೩೦)ದ ಒಂದು ದಿನ ನಿರ್ಣಯಕ್ಕೆ ಬಂದ. ವಿದೇಶಿ ಬಟ್ಟೆಯನ್ನು ಮಾರುವ ಅಂಗಡಿಯನ್ನು 'ಪಿಕೆಟ್' ಮಾಡಬೇಕೆಂದು ನಿರ್ಣಯಿಸಿದ. ಆ ನಿರ್ಣಯವನ್ನೂ ಪ್ರಕಟಿಸಿದ. ಒಂದು ವೇಳೆ ಹಾಗೆ ಹೋಗಿ ಅಂಗಡಿಯ ಮುಂದೆ ನಿಂತರೆ ಡೊಣ್ಣೆಯ ಏಟು ಬಿದ್ದೀತಲ್ಲ-ಎಂದು ಆವನ ಸಂಶಯ. ಅದಕಾಗಿ ತನ್ನ ನಿರ್ಣಯವನ್ನು ಪ್ರಕಟಿಸಿದ. ಅದು ತಿಳಿದು ಪೋಲೀಸರು ಮನೆಯ ವರೆಗೆ ಬಂದು ತನ್ನನ್ನು ಬಂಧಿಸಿಕೊಂಡು ಹೋದರೆ ಒಳಿತೇ ಆಯಿತಲ್ಲ? ಡೊಣ್ಣೆಯ ಫೆಟ್ಟಾದರೂ ತಪ್ಪಿದಂತಾಯ್ತು. ಹಮ್ಮೂನು ತನ್ನ ಬುದ್ಧಿವಂತಿಕೆಗೆ ಮೆಚ್ಚಿ ತಾನೇ ತನ್ನ ಬೆನ್ನು ಚಪ್ಪರಿಸಿಕೊಂಡ. ಯಾಕೆಂದರೆ ಮರುದಿನ ನಸುಕಿನಲ್ಲಿಯೆ ಪೋಲೀಸರು ಬಂದು ಅವನ ಮನೆಯನ್ನು ಮುತ್ತಿದರು. ಹಮ್ಮೂನು ಚಳವಳಿದಲ್ಲಿ

ಸೇರಿದ್ದರ ಕಲ್ಪನೆಯೆ ಇಲ್ಲದ ಊರ ಜನರಿಗೆ ಅದೊಂದು ದೊಡ್ಡ ಮೋಜು ಎನ್ನಿಸಿತೇನೊ? ನಸುಕಿನಲ್ಲಿ ಕೂಡ ನೂರಾರು ಜನರು ತನ್ನ ಮನೆಯ ಮುಂದೆ ನೆರೆದರು. " ಹನುಮಂತಗೌಡಕೀ ಜೈ! " ಎಂದು ಕೂಡಾ ಕೂಗಿದರು!

ಜೇಲಿನಲ್ಲಿ ಕುಳಿತಾಗ ಹಮ್ಯಾ ವಿಚಾರಮಾಡಿದ. ನಿಜವಾಗಿ ಈ ಚಳವಳಿ ಎಂದರೆ ಒಂದು ಮದ, ಒಂದು ಉನ್ಮಾದ!....ಜನರು " ಹನುಮಂತ ಗೌಡಕೀ ಜೈ! " ಎಂದಾಗ ತನ್ನ ಮೈಗೆ ಪುಳ್ಕು ಬಂದಿತು.... ಹೃದಯಕ್ಕೆ ಅತ್ಯಂತ ಸಮಾಧಾನವೆನ್ನಿಸಿತು. ಬಿಟ್ಟು ಹೋದಮೇಲೆ—ಹಮ್ಯಾ ಹೆದರಿದ. ತನ್ನ ಬಿಡುಗಡೆಯಾದರೂ ಆಗುವುದೊ ಇಲ್ಲವೊ? ಅವನ ಹೆದರಿಕೆಗೆ ಒಂದು ಕಾರಣವೂ ಇದ್ದಿತು. ಹಮ್ಯಾನನ್ನು ಬಂಧಿಸಿದ ಒಂದು ಗಂಟೆಯಲ್ಲಿ ಪೋಲೀಸರು ಹಮ್ಯಾನ ಮನೆಗೆ ಬಂದ ಇನ್ನೊಬ್ಬ ತರುಣನನ್ನು ಬಂಧಿಸಿದರು. ಆ ತರುಣನ ಕಡೆ ಮಾಧವನು ಹಮ್ಯಾಸಿಗೆ ಬರೆದ ಕಾಗದ ಸಿಕ್ಕಿತು. ಉತ್ತರ ಕನ್ನಡ ಜಿಲ್ಲೆಯ ಚಳವಳದಲ್ಲಿ ಮುಖ್ಯ ಅಂಗ ಹಮ್ಯಾನದಿದೆ ಎಂದು ಪೋಲೀಸರು ನಿರ್ಧರಿಸಿದರು....ಹಮ್ಯಾನು ಹೆಮ್ಮೆಯ ಮುಗುಳ್ನಗೆಯನ್ನು ನಕ್ಕನು. ಪೋಲೀಸರ ದಡ್ಡತನದಿಂದ ತನಗೆ ಎಂತಹ ಲಾಭ? ಜೇಲಿನಿಂದ ಹೊರಗೆ ಬರುವುದರೊಳಗಾಗಿ ಕರನಿರಾಕರಣೆಯ ಚಳವಳದ ಸಾಹಸಿಗ ತಾನು ಎಂದು ಜನರೆಲ್ಲ ತಿಳಿದಿರುವರು....ಹಹ! ಕೈಗೆ ಬಂದ ತುತ್ತನ್ನು ಬಿಡುವಂತಿಲ್ಲ ಎಂದುಕೊಂಡನು. ಆಗ ಹಮ್ಯಾಸಿಗೆ ಹೊಳೆಯಿತು. ಚಳವಳದಲ್ಲಿ ಧುಮುಕುವುದೆಂದರೆ ನಸುಕಿನ ಚಳಿಯಲ್ಲಿ ತಣ್ಣೀರೊಳಗೆ ಈಜು ಬೀಳುವಂತೆ. ಈಜು ಬೀಳುವವರೆಗೆ ಚಳಿಯ ಕಲ್ಪನೆಯಿಂದ ಹೆದರಿಕೆ. ಒಮ್ಮೆ ನೀರೊಳಗೆ ಧುಮುಕಿದರಾಯಿತು. ಮುಂದೆ ನೀರೊಳಗೆ ಉಳಿಯುವವರೆಗೆ ಬೆಚ್ಚಗೆ. ಹೊರಗೆ ಬಂದರೆ ಮಾತ್ರ ಚಳಿ....ಹಾಂ—ಅದಕಾಗಿಯೆ ಮಾಧವನೂ ಯಾವಾಗಲೂ ಬೆಚ್ಚಗೆ ಚಳವಳದಲ್ಲಿಯೆ ಉಳಿಯಬೇಕೆನ್ನುವ—ಎಂದುಕೊಂಡು ಅತ್ಯಂತ ಕಠಿಣಪ್ರಶ್ನೆಗೆ ಉತ್ತರಕೊಟ್ಟವನಂತೆ ಮತ್ತೆ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಂಡ. ಗುಟ್ಟು ತಿಳಿಯಿತು ಚಳವಳದ್ದು, ಗಾಂಧೀ ಮಹಾರಾಜಕೀ ಜೈ!

. . . . .

ಈ ಸಂಗತಿ ನೆನಪಿಗೆ ಬಂದೊಡನೆ ಮಾತ್ರ ಹಮ್ಯಾ ಗಟ್ಟಿಯಾಗಿ

ನಕ್ಕ. ತಾನು ಮೊದಲ ಸಲ “ ಗಾಂಧೀ ಮಹಾರಾಜಕೀ ಜೈ! ” ಅಂದದ್ದು ಆಗ, ಹದಿನಾರು ವರುಷಗಳ ಹಿಂದೆ, ತಾನೂ ಮೊದಲ ಸಲ ಜೇಲಿನಲ್ಲಿದ್ದಾಗ. ಈಗ? ೧೯೪೭ರಲ್ಲಿ? ಮನಸ್ಸೇ ಬದಲಾಗಿದೆ. ಇಂದು ಆ ಜಯಜಯಕಾರವನ್ನು ಕೂಗುವುದಕ್ಕೆ ಬೇಸತ್ತುದರಿಂದಲೆ ಅಲ್ಲವೆ ಮುಂಬಯಿಯಂತಹ ಪಟ್ಟಣದಲ್ಲಿಯ ಸ್ವಾತಂತ್ರ್ಯದಿನದ ಮೆರವಣಿಗೆಯನ್ನು ತಪ್ಪಿಸಿಕೊಂಡದ್ದು? ಯಾಕೆ ಹೀಗಾಯಿತು? ಇಂದು ಗಾಂಧಿಜಿಯವರ ಮಾತನ್ನು ಕೇಳಿದವರೂ, ಅವರ ವಿಧಾಯಕ ಕಾರ್ಯಕ್ರಮವನ್ನು ಚಾಚೂ ತಪ್ಪದೆ ನಡೆಸಿಕೊಂಡವರೂ ಹಿಂದೆ ಬಿದ್ದುದು ಯಾಕೆ? ಹಿಂದೆ ಬಿದ್ದಿಲ್ಲ ಎಂದು ಹೇಳುವರು....ಆದರೇನು? ಇಂದಿನ ರಾಜ್ಯಾಧಿಕಾರದ ಅಧಿಕಾರವರ್ಗವನ್ನು ನೋಡಿದರೆ ಆಗಿನ ಸ್ವರಾಜ್ಯ ಪಕ್ಷದ ಧೋರಣೆಯವರೆ ಹೆಚ್ಚು ಕಾಣುತ್ತಿದ್ದಾರೆ. ಇದೊಂದೆ ವಿಷಯದಲ್ಲಿ ಹಮ್ಮೂಮನು ಅನುಭವವಿಲ್ಲದ್ದಕ್ಕಾಗಿ ಮೋಸಹೋದನು. ನಿಜವಾಗಿ ನೋಡಿದರೆ, ಜೇಲಿನಿಂದ ಹೊರಬಿದ್ದಾಗ ಅವನ ಮಹತ್ವಾಕಾಂಕ್ಷೆಗೆ ಪೂರ ಬಂದಂತಾಗಿತ್ತು. ಎಷ್ಟು ದಿನ ಜೇಲದಲ್ಲಿದ್ದದ್ದು? ಹದಿನೈದು, ಇಲ್ಲವೆ ಇಪ್ಪತ್ತು ದಿನ ಮಾತ್ರ. ಜನುವರಿ (೧೯೩೧) ೨೬ನೆಯ ತಾರೀಕಿಗೆ ಗಾಂಧಿಜಿಯವರದೆ ಬಿಡುಗಡೆಯಾಯಿತು. ಆ ಮೇಲೆ ಹಮ್ಮೂ ದಿನಗಳನ್ನು ಎಣಿಸುತ್ತ ಕಳೆದ. ಮುಂದೆ ೮–೧೦ ದಿನಗಳಲ್ಲಿ ತನ್ನದೂ ಬಿಡುಗಡೆಯಾಯಿತು. ಆಶ್ಚರ್ಯದ ಮಾತೆಂದರೆ ಈ ಸಲ ಇದುವರೆಗೆ ಮಾಧವನು ಪೋಲೀಸರ ಕೈಗೆ ಸಿಕ್ಕಿರಲಿಲ್ಲ ....ಹಹ!....ಆ ಮೋಜು ಹಿಂದಿನಿಂದ ತಿಳಿಯಿತು ಹಮ್ಮೂಮನಿಗೆ. ತಮ್ಮ ಸಹಾಧ್ಯಾಯಿಯೊಬ್ಬ ಪೋಲೀಸ ಅಧಿಕಾರಿಯಾಗಿದ್ದನಂತೆ! ಅವನು ಪ್ರತಿದಿನ ಸಂಜೆಗೆ ಮಾಧವನಿಗೆ ಹೇಳಿ ಕಳುಹಿಸುವನಂತೆ, ಬಂಧನವನ್ನು ತಪ್ಪಿಸಿಕೊಳ್ಳಲು ಬೆಳಗಾಗುವುದರೊಳಗೆ ಯಾವ ಊರಿಗೆ ಹೋಗಬೇಕೆಂಬುದನ್ನು! ಅಂತೂ, ಮಾಧವನು ಈ ಸಲ ಉಲ್ಲಾಸದಲ್ಲಿದ್ದನು. ಹಮ್ಮೂಮನ ಹೃದಯದಲ್ಲಿಯೂ ಮಹತ್ವಾಕಾಂಕ್ಷೆಯ ಮೊಳಕೆ ಒಡೆದಿತ್ತು....ಇಷ್ಟರಲ್ಲಿ ಗಾಂಧಿ–ವೈಸರಾಯ (ಅರ್‌ವಿನ್) ಇವರ ಸಂಧಾನವಾಗಿತ್ತು. ಹಮ್ಮೂಮನು ಅತ್ಯಂತ ಹುರುಪಿನಿಂದ, ತನ್ನ ವೆಚ್ಚದಿಂದ ಮಾಧವನನ್ನು ಮಾರ್ಚ ತಿಂಗಳಲ್ಲಿ ಕರಾಚಿಯ ಕಾಂಗ್ರೆಸ ಅಧಿವೇಶನಕ್ಕೆ ಕರೆದುಕೊಂಡು ಹೋಗಿದ್ದನು.

. . . . .

೨೬

ಹಮ್ಮೂ್ಮನು ಎದ್ದ. ಗಡಿಯಾರದಲ್ಲಿ ಆರು ಹೊಡೆಯಿತು. ಅನಂತ-ಶ್ರೀಧರರನ್ನು ವೇಳೆಗೆ ಸರಿಯಾಗಿ ಭೆಟ್ಟಿಯಾಗುವುದಾದರೆ ಇನ್ನು ಹೊರಡಲೇ ಬೇಕು—ಎಂದುಕೊಂಡ. ಬಟ್ಟೆಗಳನ್ನು ಹಾಕಿಕೊಳ್ಳುವಾಗ ಅವನಿಗೆ ವಿಚಾರ ಬಂದಿತು. "ಈ ದಿನ ಮಾಧವನ ಕೋಣೆಗೆ ಬರಲು ಅನಂತ ಹೇಗೆ ಒಪ್ಪಿಕೊಂಡ?" ಯಾಕೆ ಒಪ್ಪಿರಬಹುದು ಅನಂತ? ಏನಾದರೂ ಅವನು ಆಟವನ್ನು ಸಾಧಿಸಿಕೊಳ್ಳುವವನಿರಬೇಕು, ಖಂಡಿತ—ಎನ್ನಿಸಿತು ಹಮ್ಮೂ್ಮನಿಗೆ. ಅನಂತನನ್ನು ಅರಿಯೆನೆ ನಾನು? ಎರಡು ತಿಂಗಳು ನನ್ನನ್ನು ಮನೆಯಲ್ಲಿ ಇಟ್ಟುಕೊಂಡುದಕ್ಕೆ ನನ್ನ "ವಶೀಲಿ"ಯನ್ನು ದೊರಕಿಸಿಕೊಂಡು ಇಂದು ಸೆಕ್ರೆಟೇರಿಯಟ್‌ದಲ್ಲಿ ದೊಡ್ಡ ಹುದ್ದೆಯನ್ನು ಸಾಧಿಸಿಕೊಂಡ! ಎರಡು ತಿಂಗಳ ಬಾಡಿಗೆಯನ್ನು ಕೊಟ್ಟಿದ್ದರೆ ಎಷ್ಟು ಸ್ವಲ್ಪದರಲ್ಲಿ ಮುಗಿಯಬಹುದಿತ್ತು!....ಆಯ್. ಸಿ. ಎಸ್. ಅನಂತನಿಗೆ ನನ್ನ ವಶೀಲಿ, ಆದರೆ ನನ್ನ ಮಟ್ಟಿಗೆ ಮಾತ್ರ ಅನ್ನ-ಬೇಳೆಗಳ ನಾತು ಇಡುಗಿದ ಮುಂಬಯಿ ಹೊಟೆಲ್ ತಪ್ಪುವಂತಿಲ್ಲ!....ಹಮ್ಮೂ್ಮ ಮೂಗು ಏರಿಸಿ ಉಸಿರು ಬಿಟ್ಟ, ನಾತು ಈಗಲೂ ಬಂದು ಬಡೆಯಿತೇನೊ ಎನ್ನುವಂತೆ....ಹೊಟೆಲ್‌ದ ಹವೆಯನ್ನು ಹೊರಗೆ ಒಯ್ಯುವುದೇಕೆ—ಎಂದು ಮತ್ತೊಮ್ಮೆ ನಗೆಯಿಂದ ಉಸಿರುಬಿಟ್ಟು ಕೋಣೆಯಿಂದ ಹೊರಕ್ಕೆ ಬಂದ. ಬಾಗಿಲಿಗೆ ತಡೆದ, ಕೋಣೆಗೆ ಕೀಲಿಹಾಕಬೇಕೆಂದು ಮತ್ತೆ ನಕ್ಕ ತನ್ನ ಮೂರ್ಖತನಕ್ಕೆ....ತಲೆಯಲ್ಲಿ ಏನೇನೊ ವಿಚಾರಗಳಿದ್ದುದರಿಂದ ಕೋಣೆಗೆ ಕೀಲಿಹಾಕಬೇಕೆಂದು ಚಟಕ್ಕಾಗಿ ಎನ್ನಿಸಿತು....ಇಲ್ಲವಾದರೆ ಹೊಟೆಲ್‌ದ ಕೋಣೆಗೆ ಕೀಲಿಯನ್ನು ಹಾಕುವಂತಿಲ್ಲ ಎಂಬುದು ಅವನಿಗೆ ಗೊತ್ತಿತ್ತು. ಕೀಲಿಹಾಕುವುದಾದರೂ ಹೇಗೆ? ತನ್ನನ್ನು ಬಿಟ್ಟು ಇನ್ನೂ ಆರು ಜನರಿದ್ದಾರೆ ಆ ಕೋಣೆಯಲ್ಲಿ! ಏಳು ಜನ ಇರುವುದು ಹೇಗೆ? ಇಲ್ಲದೆ ಇರುವುದು! ಹಮ್ಮೂ್ಮನಿಗೆ ಮೋಜೆನ್ನಿಸಿತು. ಇದೊಂದು ತತ್ತ್ವಜ್ಞಾನದ ತೊಡಕಿನಂತೆ, ಏಳು ಜನ ಇರಲಾರರು ಎಂದೇ ಏಳು ಜನ ಇರಲಿಕ್ಕೆ ಶಕ್ಯವಿದೆ!.... ಯಾವಾಗಲೂ ಒಬ್ಬಿಬ್ಬರಾದರೂ ತಮ್ಮ ಕೆಲಸಕ್ಕೆಂದು ಹೊರಗೇ ಹೋಗಿರುತ್ತಾರೆ....ಹಮ್ಮೂ್ಮ ಬೀಳುತ್ತಿದ್ದ ವಿಚಾರದ ಭರದಲ್ಲಿ. ಪಾವಟಿಗೆ ಪ್ರಾರಂಭವಾಯಿತೆಂಬುದನ್ನು ಮರೆತೇ ಹೆಜ್ಜೆಯನ್ನಿಟ್ಟಿದ್ದ, ಆದರೂ ಕೂಡಲೇ ಸಾವರಿಸಿ

ಕೊಂಡು, ಸುತ್ತಲು ಯಾರೂ ಇದ್ದಿರಲಿಲ್ಲ ಎಂದು ಸಮಾಧಾನ ತಂದುಕೊಂಡು ಸರಸರನೆ ಕೆಳಗಿಳಿದ. ಮುಂಬಯಿ ಊರಲ್ಲಿ ಮೊದಲು ಪಾವಟಿಗೆಗಳನ್ನು ಕಟ್ಟಿ ಉಳಿದ ಜಾಗೆಯಲ್ಲಿ ಮನೆಗಳನ್ನು ಕಟ್ಟಿರುವರೇನೊ!....

ಹಮ್ಮ್ಯಾನು ಕೆಳಗೆ ಬೀದಿಗೆ ಬಂದಾಗ ಯಾವುದೊ ಗಡಿಯಾರದಲ್ಲಿ ಆರು ಹೊಡೆಯಿತು....ಮುಸಲ್ಮಾನನ ಅಂಗಡಿ....ಪಾಕಿಸ್ತಾನದ ವೇಳೆಯೂ ಪ್ರತ್ಯೇಕವಾಗುವುದೇನೊ, ಕಾಂಗ್ರೆಸಿಗಿಂತ ಹತ್ತು ನಿಮಿಷ ಹಿಂದೆ?....ಹಮ್ಮ್ಯಾ ಸುತ್ತಲೂ ನೋಡಿದ. ಚಕಿತನಾದ. ಬೀದಿಯು ತುಂಬ ಜನ!....ಹೊಟೆಲ್‌ದಲ್ಲೂ ಜಾಗೆ ಇಲ್ಲ, ಹೊರಗೂ ಜಾಗೆ ಇಲ್ಲ! ಹಮ್ಮ್ಯಾ ನಡೆದ....ನಡೆಯುತ್ತ ಹೋಗೋಣವೆ, ಟ್ರ್ಯಾಮನ್ನು ಹಿಡಿದುಕೊಂಡು ಹೋಗೋಣವೆ?... ಹಹ! 'ಟ್ರ್ಯಾಮನ್ನು ಹಿಡಿದುಕೊಂಡು' ಎಂಬುದೆ ನಿಜ. ಯಾಕೆಂದರೆ, ಹಿಡಿದು ಹೊರಗೆ ಜೋತುಬೀಳಲು ಕೂಡ ಶಕ್ಯ ಇಲ್ಲ, ಒಳಗೆ ಕೂಡುವುದಂತೂ ದೂರವೆ ಉಳಿಯಿತು. ನಡೆದುಕೊಂಡೇ ಹೋಗುವುದುತ್ತಮ ಎಂದ. ನಡೆಯಲು, ಎಂದರೆ ಮೊದಲನೆ ಹೆಜ್ಜೆಯನ್ನಿಡಲು, ಪ್ರಯತ್ನಮಾಡಿದ. ಊರಿದ ತನ್ನ ಕಾಲಿನ ಮೇಲೆ ಇನ್ನೊಬ್ಬನ ಕಾಲು, ಊರುವ ಮುಂದಿನ ತನ್ನ ಕಾಲು ಮತ್ತೊಬ್ಬನ ಕಾಲಿನ ಮೇಲೆ, ಇಷ್ಟರಲ್ಲಿ ಇದಿರಿನಿಂದ ಅವಸರದಿಂದ ಹೋಗುವ ಒಂದು ವ್ಯಕ್ತಿ ನೂಕಿತು ತನ್ನನ್ನು; ಥೂ! ಒಂದು ನಿಮಿಷ ಹಮ್ಮ್ಯಾನಿಗೆ ಎರಡೂ ಕಾಲ್ಗಳು ನೆಲವನ್ನು ಬಿಟ್ಟುವು—ಎಂದೆನ್ನಿಸಿತು....ಸಾವರಿಸಿಕೊಂಡ, ಹೇಗೋ ಸುಧಾರಿಸಿಕೊಂಡ....ಶಾಸನಸಭೆಯ ಸದಸ್ಯರಿಗೆ-ಹವೆಯಲ್ಲಿ ನಡೆಯುವ ಶಕ್ತಿ ಬೇಕೆಂದು ಕಾನೂನನ್ನು ಮಾಡಿಸಬೇಕು. ಎಂದರೆ—ಎದೆ 'ಠಕ್' ಎಂದಿತು. ಇದೇನು? ಎದೆ ಹಾರುವ ಸದ್ದು ಇಷ್ಟು ಗಟ್ಟಿಸಿ—ಅಲ್ಲ, ಹಮ್ಮ್ಯಾನಿಗೆ ಎಚ್ಚರಾಯಿತು. ಯಾರೊ ಒಬ್ಬರು ತನಗೆ ಹಾಯ್ದಿದ್ದಾರೆ....ಇನ್ನು ಹೆಚ್ಚು ಎಚ್ಚರದಿಂದ ನಡೆಯಬೇಕು ಎಂದು ಎದುರು ಬರುವವರನ್ನು ನೋಡುತ್ತ ನಡೆದ. ಅದೂ ಸಾಧಿಸಲಿಲ್ಲ. ತಾನು ಎಡಕ್ಕೆ ಸರಿದುಕೊಂಡ, ಎದುರಿನವನು ಬಲಕ್ಕೆ ಸರಿದುಕೊಂಡ, ಮತ್ತು ಇಬ್ಬರೂ ಇದಿರಾಇದಿರೇ! ಇನ್ನೊಂದು ಬದಿಗೆ ಸರಿಯುವಾಗಲೂ ಹಾಗೇ ಆಗಿ ಕೊನೆಗೆ ನಿಂತಲ್ಲಿಯೆ ನಿಂತುಬಿಡಬೇಕಾಯಿತು. ಆದರೆ ನಿಂತು ನಡೆಯುವುದು ಹೇಗೆ?....ತನ್ನ ವಿಚಾರಕ್ಕೆ ತಾನು ನಕ್ಕ, ತಾನು ನಕ್ಕುದಕ್ಕಾಗಿ ಇದಿರಿನವನು ನಕ್ಕ....ಸರಿ—ಆದರೆ ಪ್ರಾರ್ಥನಾ ಸಮಾಜಕ್ಕೆ

ಇಪ್ಪತ್ತು ನಿಮಿಷಗಳಲ್ಲಿ ಮುಟ್ಟುವುದು ಹೇಗೆ?....ಎಲ್ಲರನ್ನೂ ತಪ್ಪಿಸಿ ಸಾಗುವುದು ಹೇಗೆ? ಹಮ್ಮೂನಿಗೆ ನಗೆ ಬಂದಿತು, ಹಿಂದೊಮ್ಮೆ ಎಲ್ಲರನ್ನೂ ತಪ್ಪಿಸಿದ ಮೋಸಕ್ಕಾಗಿ.

. . . . . .

೧೯೩೨ರ ಚಳವಳ, ಎರಡು ತಿಂಗಳ ವರೆಗೆ ಅಗಸ್ಟ ೯ ರಿಂದ ಗಾಂಧಿ ಜಯಂತಿಯು ವರೆಗೆ ಹಮ್ಮೂ ಎಲ್ಲರನ್ನೂ ತಪ್ಪಿಸಿದ್ದ. ತನ್ನ ಗೆಳೆಯರಿಗೆ ಕೂಡ ಗೊತ್ತಿರಲಿಲ್ಲ, ತಾನು ಎಲ್ಲಿ ಇರುವೆನೆಂಬುದು....ಈ ಕೆಲಸ ಬಲು ಹಗುರ ಎಂದೆನಿಸಿತ್ತು ಹಮ್ಮೂನಿಗೆ. ಕರಾಚಿ ಕಾಂಗ್ರೆಸದ ವರ್ಷದಲ್ಲೂ ಇಂತಹದೆ ಒಂದು ಅನುಭವ ಬಂದಿತ್ತು. ಆ ತರುವಾಯದ ಜನುವರಿ ತಿಂಗಳಲ್ಲಿ ಮತ್ತೆ ಗಾಂಧಿಜಿಯುವರನ್ನು ಸರಕಾರವು ಬಂಧಿಸಿತ್ತು. ಮತ್ತೆ ಚಳವಳ ಜೋರಾಗಿತ್ತು. ಈ ಸಲ ಹಮ್ಮೂನಿಗೆ ಯಾರ ಉಪದೇಶವೂ ಬೇಕಿರಲಿಲ್ಲ. ಚಳವಳ ಪ್ರಾರಂಭವಾದ ಕೂಡಲೆ ಮುಂಬಯಿಗೆ ಬಂದಿದ್ದ. ನಾಲ್ಕಾರು ಕಾಂಗ್ರೆಸಿಗರನ್ನು ಭೆಟ್ಟಿಯಾದ. ಪುಣೆಯಿಂದ ಒಂದು ಕಾಗದ ಬರೆದು ಆ ಸಂಗತಿಯನ್ನು ಮಾಧವನಿಗೆ ತಿಳುಹಿಸಿದ. ಹಮ್ಮೂನು ಮುಂಬಯಿಯಲ್ಲಿ ಚಳವಳದ ನೇತೃತ್ವವನ್ನು ವಹಿಸಿದ್ದಾನೆಂದು ಮಾಧವ ತಿಳಿದ; ಹಮ್ಮೂ ಊರಿಗೆ ಹೋಗಿ ಕರ್ನಾಟಕದಲ್ಲಿ ಚಳವಳದ ನೇತೃತ್ವವನ್ನು ವಹಿಸಿದ್ದಾನೆಂದು ಮುಂಬಯಿಯ ಕಾರ್ಯಕರ್ತರು ತಿಳಿದರು. ಅಂತೂ, ತಾನು ಸಾಗಿಸಿದ್ದ, ಎಲ್ಲರನ್ನೂ ತಪ್ಪಿಸಿ..ಮುಂದೆ ಚಳವಳ ಮುಗಿದಾಗ ತಾನೊಬ್ಬ ದೊಡ್ಡ ಮುಂದಾಳು ಎಂದು ಎಲ್ಲರೂ ಗೃಹೀತವಾಗಿಟ್ಟುಕೊಂಡಾಗ ತನ್ನ ನೀತಿ ಸಾಧಿಸಿದ್ದರ ಬಗ್ಗೆ ಹಮ್ಮೂನಿಗೆ ಸಮಾಧಾನವಾಯಿತು. ಮಧ್ಯದಲ್ಲಿ ಇನ್ನೊಂದು ಸಂದರ್ಭ ಒದಗಿತ್ತು. ಗಾಂಧಿಜಿಯುವರು ಆಮರಣ ಉಪವಾಸ ಕೈಕೊಂಡಿದ್ದರು; ಮುಂದೆ ರಾಜಕಾರಣವನ್ನು ಬಿಟ್ಟುಕೊಟ್ಟಿದ್ದೇನೆ ಎಂದು ಸಾರಿದ್ದರು. ಒಮ್ಮೆ ಅವರು ಸಂಚಾರದಲ್ಲಿ ಕರ್ನಾಟಕಕ್ಕೆ ಬಂದಾಗ ಐದು ನಿಮಿಷ ಹಮ್ಮೂನಿಗೆ ಸಂದರ್ಶನ ದೊರೆಯಿತು. ಮುಂದೆ ತಾನೂ ರಾಜಕಾರಣವನ್ನು ಬಿಟ್ಟಿದ್ದೇನೆ ಎಂದು ಸಾರಿದ್ದನು. ಜನರಿಗೆ ಇವನ ಸಲುವಾಗಿ ಆದರ ಹೆಚ್ಚಿತು. ಇವನ ಮುಂದಾಳುತನದ ಮಟ್ಟೂ ಏರಿತು....ಆಗ ಹಮ್ಮೂನಿಗೆ ಒಂದು ಮಹತ್ತ್ವದ ಮಾತು ಹೊಳೆದಿತ್ತು. ಕಾಂಗ್ರೆಸದಲ್ಲಿ ಕೆಲಸ ಮಾಡುವುದಾದರೆ ಮುಂದಾಳಾಗಿಯೇ ಮಾಡಬೇಕು. ಇಲ್ಲದಿದ್ದರೆ ದೇಶಕ್ಕೆ ಅದರ ಉಪಯೋಗವಿಲ್ಲ. ತನಗೆ ಆದರ

ಲಾಭವಿಲ್ಲ—ಎಂಬುದು. ಅಂತೂ ಆ ಸಲ ಶಾಸನಸಭೆಯ ಚುನಾವಣೆ ನಡೆದಾಗ ತಾನು ನಿಲ್ಲಲು ನಿರಾಕರಿಸಿದ್ದು—"ಹಮ್ಮೊ ಮಹಾರಾಜಕೀ ಜೈ!" ಆಗಿತ್ತು. ಗಾಂಧಿ ಆಶ್ರಮವನ್ನು ಸ್ಥಾಪಿಸಿದ, ಫಂಡಿಗಾಗಿ ಅಲೆದಾಡಿದಾಗ ಸಾವಿರಾರು ಜನರ ಪರಿಚಯ ಆಯಿತು, ಮುಂದಿನ ಇಲೆಕ್‌ಶನ್ನದ ತಯಾರಿಯೆ ಆಯಿತು....ಹಮ್ಮೊ ವಿಚಾರದಿಂದ ತನ್ನ ಬೆನ್ನು ತಾನು ಚಪ್ಪರಿಸುತ್ತಿರುವಾಗ ನಿಜವಾಗಿಯೆ ಯಾರೊ ತನ್ನ ಬೆನ್ನು ಚಪ್ಪರಿಸುತ್ತಿರುವಂತೆ ಭಾಸವಾಯಿತು....ಹಿಂತಿರುಗಿ ನೋಡಿದ. ತನ್ನ ಬೆನ್ನಿಗೆ ಬಡೆದದ್ದು ಕೈಯಲ್ಲ, ಕೋಲು. ಕೋಲಿಗೆ ಧ್ವಜ ಹಚ್ಚಿಕೊಂಡು ನಡೆದ ಯಾವುದೊ ಒಂದು ಮೆರವಣಿಗೆ. ಹಮ್ಮೊ ಎಚ್ಚರಾದ ... ಮೆರವಣಿಗೆಯಿಂದ ಪಾರಾಗಲು ಬದಿಗೆ ಸರಿಯಲು ಯತ್ನಿಸಿದ....ಸಾಧ್ಯವಾಗಲಿಲ್ಲ—ಆದರೆ "ಗಾಂಧೀ ಮಹಾರಾಜಕೀ ಜೈ!" ಎಂದು ಮೆರವಣಿಗೆ ರಭಸದಿಂದ ಸಾಗುತ್ತ ಅನಾಯಾಸವಾಗಿ ಹಮ್ಮೊನನ್ನು ಬದಿಗೆ ನೂಕಿ ಸಾಗಿತು....'ಜನತೆಯ ಶಕ್ತಿ' ಎಂದುಕೊಂಡ... ತನ್ನ ಮಗ್ಗುಲಿಗೆ ಎಷ್ಟು ಜನರಿದ್ದರೊ? ಅವರನ್ನು ಸರಿಸಲು ತನಗೆ ಶಕ್ಯವಿದ್ದಿರಲಿಲ್ಲ. ಆದರೆ ಅವರನ್ನೂ ತನ್ನನ್ನೂ ಕೂಡಿಯೆ ಸರಿಸಿತಲ್ಲ ಈ ಮೆರವಣಿಗೆ!.... "ಗಾಂಧೀ ಮಹಾರಾಜಕೀ ಜೈ!"....ಪಾಪ! ಯಾಕೆ ಕೂಗುವರೊ ಆ ಮಹಾತ್ಮನ ಹೆಸರಿನಿಂದ? ಮುಗಿಯಿತು ಅವನ ಯುಗ....

. . . . .

ಗಾಂಧಿಯುಗ ಮುಗಿದದ್ದು ೧೯೪೨ರ ಚಳವಳದಲ್ಲಿಯೆ. ಎರಡು ತಿಂಗಳು ತಾನು ಸುಖದಿಂದ ಅನಂತನ ಬಂಗಲೆಯಲ್ಲಿ "ಅಜ್ಞಾತವಾಸ" ವಾಗಿದ್ದಾಗ ಈ ಮಾತು ಹೊಳೆದಿತ್ತು ಹಮ್ಮೊನಿಗೆ....ಪೋಲೀಸರನ್ನು ತಪ್ಪಿಸುವ ಮೋಸಗಾರಿಕೆ, ಸ್ಟೇಶನ—ಚಾವಡಿಗಳನ್ನು ಸುಡುವ ಅತ್ಯಾಚಾರ, ತಂತಿಯನ್ನು ಕತ್ತರಿಸುವುದು, ಹಳಿಗಳನ್ನು ಸ್ಥಳಾಂತರಿಸುವುದು—ಎಲ್ಲ ಅಸತ್ಯ ಮತ್ತು ಹಿಂಸೆಗಳಿಂದ ಪ್ರೇರಿತವಾದದ್ದು. ಆದರೂ—ಯಾರದೂ ಅಡ್ಡಿ ಇರಲಿಲ್ಲ! ಜನತೆಯ ಶಕ್ತಿ!....ಹಹ....ಆ ಶಕ್ತಿಯ ಮುಂದೆ ಗಾಂಧಿವಾದ ಬದಿಗೆ ನೂಕಲ್ಪಟ್ಟಿತು....ಹಮ್ಮೊನು ಅವಸರವಸರವಾಗಿ ಹೆಜ್ಜೆಗಳನ್ನಿಡಹತ್ತಿದ.... ಒಳಗಿನ ವಿಚಾರಗಳ ಭರಕ್ಕೆ ತಾಳ ಹಿಡಿವಂತೆ ಹೆಜ್ಜೆಗಳೂ ಭರದಿಂದ ಸಾಗಿವೆ ....ಮೋಜು! ಆ '೪೨ರ ಮೋಜೇ ಮೋಜು'..ಆಯ್. ಸಿ. ಎಸ್. ಅಧಿಕಾರಿಯ

ಮನೆಯಲ್ಲಿ ಅಜ್ಞಾತವಾಸ....ಮುಂದಾಳುತನವಂತೂ ಮೈಮೇಲೆ ಬಿದ್ದಿದೆ.... ಕುಳಿತಲ್ಲಿಂದಲೆ 'ಆರ್ಡರ' ಹೊರಡಿಸುವುದು!....ನಿಜವಾದ ಮುಂದಾಳು ಯಾರಿದ್ದರೊ? ಯಾರಿದ್ದರೂ, ನಾಲ್ಕಾರು ಸ್ಟೇಶನ್ನು ಸುಡಿಸಿದ ಯಶಸ್ಸು ತನಗಿದೆ, ಬೇಡಾದವರ ಬಣವೆ ಸುಡಿಸಿದಂತೆ.... 'ಧೀರ ಶೂರರಲ್ಲಿ ತಾನೊಬ್ಬ ....ಈಗಲೂ ಎದೆ ಸೆಟೆಸಿ ನಡೆಯುತ್ತಲಿದ್ದಾನೆ....ಎಂತೆಂತಹ ಶೂರರನ್ನು ಕಂಡಿದ್ದನು ಆಗ....ಆಗಲೇ ಮುಗಿಯಿತು ಗಾಂಧಿಯುಗ....ಗಾಂಧಿ ಭಕ್ತರ ಜೋಳಿ ಬೆಯ್ಯಲಿಲ್ಲ ಆಗ....ಪಟಪಟ ಜೇಲಿಗೆ ಹೋದರು....ಒಬ್ಬಿಬ್ಬರು ಹಟಕ್ಕಾಗಿ 'ಕ್ರಾಂತಿ'ಯಲ್ಲಿ ಸೇರಿದಾಗ—ಹಹ!—ಒಂದು ಸ್ಟೇಶನ ಸುಡುವಾಗ ಗಾಂಧಿ ಭಕ್ತನೊಬ್ಬ ಬೆಂಕಿ ಹಚ್ಚಿ ಅವಸರದಿಂದ ಓಡುವಾಗ ಖಾದೀ ಕೈಚೀಲಿನಲ್ಲಿ ತನ್ನ ಹೆಸರು ಬರೆದ ಭಗವದ್ಗೀತೆಯ ಪ್ರತಿಯನ್ನಿಟ್ಟು ಚೀಲವನ್ನೇ ಬಿಟ್ಟು ಹೋಗಿದ್ದ!....ಅವರ ಕೆಲಸವೆ ಅಲ್ಲ ಅದು, ಅವರ ಯುಗಾನೇ ಮುಗಿಯಿತು ಅಂದು....ಪಾಪ! ಮಾಧವ—

ಹಮ್ಮ್ಯಾ ಮುಖವನ್ನೆತ್ತಿ ಮೇಲಕ್ಕೆ ನೋಡಿದ. ಮಾಧವನ ಸ್ಮರಣೆಯಾದೊಡನೆ ಎಚ್ಚರಾದಂತಾಗಿ ಸುತ್ತಲೂ ನೋಡಿದ....ಎಷ್ಟು ಹೊತ್ತಾಯಿತೊ?....ಥೂ! ಈ ಮುಂಬಯಿಯ ಜನಸಂದಣಿ ಎಂದರೆ—ಸಾಕು, ಈ ಮುಂಬಯಿಯ ವಾಸವೆ ಸಾಕು. ಈ ಶಾಸನಸಭೆಯ ವಾಸವೂ ಸಾಕು ಹಮ್ಮ್ಯಾನಿಗೆ ಮತ್ತೆ ಸಿಟ್ಟು ಬಂದಿತು. ತನ್ನನ್ನು 'ಧೀರ ವೀರ ಎಂದು ಚುನಾಯಿಸಿದಾಗ ಸಂತೋಷ ಎನ್ನಿಸಿದ್ದರೂ ಇಂದಿನ ತನ್ನ ಅವಸ್ಥೆಗಾಗಿ ಅವನು ಕನಲಿದ್ದನು....ಗಾಂಧೀ ಯುಗ ಮುಗಿದಿಲ್ಲ! ಹಮ್ಮ್ಯಾನ ಮೈ ಜುಮ್ಮೆಂದಿತು....ತನ್ನದು ಸುಳ್ಳು ಸಮಾಧಾನ....ಗಾಂಧೀ ಯುಗ ಮುಗಿದಿಲ್ಲ!... ಕ್ರಾಂತಿಯ ಕೆಲಸ ಮಾಡಿದವರು ತಾವು, ಈಗ ಮತ್ತೆ ಗಾಂಧಿಯ ಜನವೆ ಮುಂದೆ ಬರಹತ್ತಿದೆ....ತಿಳಿಯಿತು ಹಮ್ಮ್ಯಾನಿಗೆ ತನಗೆ ಯಾಕೆ ಅಧಿಕಾರದ ಜಾಗೆ ಸಿಕ್ಕಿಲ್ಲ ಎಂಬುದು....ಇಷ್ಟೇಕೆ, ಇನ್ನು ಸಿಗುವಂತಲೇ ಇಲ್ಲ.... ಸಾಕಪ್ಪಾ, ಸಾಕು ಈ ಕಾಂಗ್ರೆಸು!....ಮುಂದೆ ಗತಿ? ಇಷ್ಟು ದಿನ ಕಾಂಗ್ರೆಸು, ಅದರ ಮುಂದಾಳುತನ ಇದರಿಂದಲೆ ಹೊತ್ತು ಹೋಗುತ್ತಿತ್ತೆನ್ನಬಹುದು.... ಅದನ್ನು ಬಿಟ್ಟರೆ—?....ಹಮ್ಮ್ಯಾ ನಕ್ಕ.... ಸಂದರ್ಭ ಬಂದಿದೆ, ಕರ್ನಾಟಕ ಪ್ರಾಂತವಾಗಲಿದೆ; ನಾನು ಗವರ್ನರ, ಅನಂತ ಚೀಫ್ ಸೆಕ್ರೆಟರಿ! ಅನಂತ—

"ಹೆಲ್ಲೊ !"

ಹಮ್ಮೊ ಬೆದರಿನಿಂತ. ಎದುರು ನೋಡಿದ. ಅನಂತ, ಶ್ರೀಧರ ಇಬ್ಬರೂ ನಿಂತಿದ್ದಾರೆ.

"ನೀನು ಕಡೆಗೆ ಕಾನ್ಸ್ಟಿಟುಎಂಟ್ ಅಸೆಂಬ್ಲಿಗೆ ಇಲೆಕ್ಟ್ ಆಗಿ ಹೋದೆಯೇನೊ ಅಂತ ತಿಳಿದಿದ್ದೆ" ಎಂದ ಅನಂತ.

"ಶ್ರೀಧರ ಇದ್ದಾನಲ್ಲ sabotage ಮಾಡಲಿಕ್ಕೆ–" ಶ್ರೀಧರ ತನ್ನನ್ನು ಚಕಿತನಾಗಿ ನೋಡಲು–"ನೀನು ಕಮ್ಯುನಿಸ್ಟ ಇದ್ದದ್ದು ಸುಳ್ಳೇನು ಹೇಳು" ಎಂದ ಹಮ್ಮೊ.

ಮುವ್ವರೂ ಗೆಳೆಯರು ನಕ್ಕರು.

೨೭

ಬೀದಿಯಲ್ಲಿಯ ಜನಸಂದಣಿಗಾಗಿ ಮುವ್ವರು ಗೆಳೆಯರಿಗೆ ಪರಸ್ಪರ ಮಾತನಾಡಲು ಶಕ್ಯವಾಗಲಿಲ್ಲ. ಮುವ್ವರ ಮನಸ್ಸೂ ಮಾತನಾಡಲು ಉತ್ಸುಕವಿದ್ದಿರಲಿಲ್ಲ ಎಂಬುದು ಅವರ ಮುಖಮುದ್ರೆಯಿಂದ ಹೊಳೆಯು ವಂತಿತ್ತು. ಮುವ್ವರೂ ಇದಿರು ನೋಡುತ್ತಲೆ ನಡೆದಿದ್ದರು. ಅನಂತ ನಡುವೆ, ಯುರೋಪಿಯನ ವೇಷದಲ್ಲಿ; ಅವನ ಬಲಕ್ಕೆ ಹಮ್ಮೊ, ಖಾದೀ ದೋತರ, ನೆಹರು ಶರ್ಟು–ಮತ್ತು ಜಾಕೀಟು, ತಲೆಗೆ ಗಾಂಧಿ ಟೊಪ್ಪಿಗೆ; ಅನಂತನ ಎಡಕ್ಕೆ ಶ್ರೀಧರ, ಒಂದು ಬನಿಯನ್, ಒಂದು ಪೈಜಾಮಾ, ಬರಿ ತಲೆ.... ಶ್ರೀಧರ ಓರೆನೋಟದಿಂದ ಈ ದೃಶ್ಯವನ್ನು ನೋಡಿಕೊಂಡಿದ್ದ. ಹಿಂದು ಸ್ತಾನದ ಆರ್ಥಿಕ ತ್ರಿವರ್ಣಧ್ವಜ–ಎಂದುಕೊಂಡಿದ್ದ. ಅನಂತನೂ ನೋಡಿದ್ದ; ಆಧುನಿಕ ಹಿಂದುಸ್ತಾನದ ಮೂರು ದ್ವಿಜ ಜಾತಿಗಳು, ಎಂದುಕೊಂಡ. ಹಮ್ಮೊನು ನೋಡಿದ್ದ; "ಮುವ್ವರು ಮೋಸಗಾರರು," ಎಂದಿದ್ದ.

"ರಾತ್ರಿ ತಾಜಮಹಾಲ ಹೊಟೆಲಿಗೆ ಹೋಗುವೆ" ಎಂದುಕೊಂಡ ಅನಂತ.

"ರಾತ್ರಿ ಊಟ ಮಾಡಬಾರದು" ಎಂದುಕೊಂಡ ಶ್ರೀಧರ.

"ರಾತ್ರಿ ಆ ಈಕೆಯ ಮನೆಗೆ ಹೋಗಿ ಮೋಜು ಮಾಡೋಣ" ಎಂದುಕೊಂಡ ಹಮ್ಮೊ.

ಬೀದಿಯ ಜನಸಂದಣಿ ತಡೆಯುದಷ್ಟು ದಟ್ಟವಾಯಿತು.

" Stupid fools! ಸ್ವಾತಂತ್ರ್ಯ ಅಂದ್ರೆ ರಸ್ತೇದ ತುಂಬ ಮಕ್ಕಳನ್ನ ಕಟ್ಟಿಕೊಂಡು ತಿರುಗಾಡೋದು ಅಂತ ತಿಳಿದಾರೆ" ಎನ್ನಿಸಿತು ಅನಂತನಿಗೆ.

" ಹುಚ್ಚರು! ತಿನ್ನಲಿಕ್ಕೆ ಸಿಗೋದಿಲ್ಲ, ಮಾಡೇನಂದ್ರೆ ನೋಕರಿ ಸಿಗಲಿಕ್ಕಿಲ್ಲ–ಯಾಕೆ ಮೆರೆದಾಡತಾರೊ" ಎನ್ನಿಸಿತು ಶ್ರೀಧರನಿಗೆ.

" ಕಾನ್ ಸ್ಟಿಟುಎಂಟ್ ಅಸೆಂಬ್ಲಿಗೆ ಆರಿಸಿ ಹೋಗಿದ್ದರೆ ಈ ಗದ್ದಲದೊಳಗ ಈಸೋದು ತಪ್ಪಿತ್ತು" ಎನ್ನಿಸಿತು ಹಮ್ಮೂಗೆ.

ಮುವ್ವರೂ ಮಾತಿಲ್ಲದೆ ನಡೆದರು.

× × × × ×

೫. ಪುರುಷಾರ್ಥ

ಮುವ್ವರೂ ಮಾತನಾಡದೆಯೆ ನಡೆದದ್ದು ಮುವ್ವರ ಲಕ್ಷ್ಯಕ್ಕೂ ಬಂದಿತ್ತು. ಒಬ್ಬರದೊಬ್ಬರಿಗೆ ಗೊತ್ತಿಲ್ಲದಿದ್ದರೂ ಮುವ್ವರ ಮನಸ್ಸಿನಲ್ಲೂ ಒಂದೇ ವಿಚಾರವಿದ್ದಿತು. ಈ ದಿನ ಸ್ವಾತಂತ್ರ್ಯೋತ್ಸವದಲ್ಲಿ ಭಾಗ ವಹಿಸದಿದ್ದುದು ಸರಿಯಾಯ್ತೆ? ಆದರೆ ಒಂದು ಸಮಾಧಾನ. ನಾಲ್ವರೂ ಇಂದು ಹತ್ತು ಒಂದೆಡೆ ಸೇರುವವರು. ಆದರೇನು? ಹಿಂದಿನ ಗೆಳೆತನ ಇಂದು ಬಂದೀತೆ? ಅಥವಾ—ಆ ಗೆಳೆತನ ಹೋಯಿತು ಎಂಬುದು ಇಂದು ಯಾವುದೊ ನಿಮಿತ್ತದಿಂದ ನೆನಪಾಗಿ ಈ ನಿರುತ್ಸಾಹವೆ? ನಿರುತ್ಸಾಹ? ನಿರುತ್ಸಾಹವಲ್ಲ—ಅನುತ್ಸಾಹ. ಎಳೆಯರಿದ್ದಾಗ, ಗೆಳೆಯರಿದ್ದಾಗ ಎಂತಹ ಮಾತುಗಳನ್ನಾಡಿದ್ದೆವು? ಇಂದು ಸಾಧಿಸಿದ್ದೇನು? ಕಾಂಗ್ರೆಸದಲ್ಲಿ ನಿಸ್ವಾರ್ಥ ಸೇವೆ ಮಾಡಿದ್ದಕ್ಕಾಗಿ ಸ್ವಾರ್ಥಸಾಧಿಸಲಿಲ್ಲವೆಂದು? ಛಿ—ನಾಚಿಕೆಗೇಡು! ಸಾಧಿಸಿದ್ದೇನು? ಕಾಂಗ್ರೆಸ ಸೇರದಿದ್ದರೂ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಲಿದ್ದೇನೆ—ಎಂದು? ಥೂ! ಹೇಳಿಕೊಳ್ಳಲಾರೆ....ಕಾಂಗ್ರೆಸದ ದಾರಿಯನ್ನು ಹಿಡಿದು, ಆ ಮೇಲೆ ಕೊನೆಗೆ ನನ್ನಷ್ಟಕ್ಕೆ ನಾನು ಸುಖ ಹಚ್ಚಿಕೊಂಡಿದ್ದೇನೆಂದು? ಎಂತಹ ಪುರುಷಾರ್ಥ! ಹನ್ಮ್ಯಾ-ಅನಂತ-ಶ್ರೀಧರರು ತಂತಮ್ಮ ವಿಚಾರಗಳಿಗಾಗಿ ಬೆಚ್ಚಿದರು. ದಾರಿಗುಂಟ ದೀಪ ಸಾಲುಸಾಲಾಗಿ ಹೊತ್ತುತ್ತಲಿವೆ, ಮಿಣುಕುತ್ತಲಿವೆ, ಮಿಂಚುತ್ತಲಿವೆ; ಸುತ್ತಲಿನಿಂದಲೂ ನಗೆ, ಹಾಡು, ಜಯಜಯಕಾರ, ಹರ್ಷೋದ್ಗಾರ ಕೇಳಬರುತ್ತಲಿವೆ; ರಾತ್ರಿಗಾಗಿ ಎಷ್ಟೋ ಜನ ಬಣ್ಣಬಣ್ಣದ ದೀಪದ ಧ್ವಜಗಳನ್ನು ನಿಲ್ಲಿಸಿದ್ದಾರೆ. ಎಲ್ಲಿ ನೋಡಿದಲ್ಲಿ ಆನಂದ ಉತ್ಸವಗಳಿರುವಾಗ ನಮ್ಮ ಮನಸ್ಸಿನಲ್ಲಿ ಅನುತ್ಸಾಹದ ಕತ್ತಲೆ ಯಾಕೆ? ಸ್ವಾತಂತ್ರ್ಯದ ದಿನ, ಹಿಂದಿನದೆಲ್ಲವನ್ನೂ ಮರೆತು ಮುಂದಿನದಕ್ಕಾಗಿ ನಗೆಯಿಂದ, ಧೈರ್ಯದಿಂದ ಎದುರು ನೋಡೋಣ—ಎಂದು ಮುಂದಾಳುಗಳೆಲ್ಲರೂ ಸಾರಿ ಸಾರಿ ಹೇಳುತ್ತಿರುವಾಗ ನಮ್ಮ ಮನಸ್ಸು ಸಿಕ್ಕನೆವವನ್ನು ಸಾಧಿಸಿಕೊಂಡು ಹಿಂದು ಹಿಂದೇಕೆ ಓಡುವುದು? ನಿಜವಾಗಿ ನಾವೇ ಬುದ್ಧಿವಂತರು, ನಗುವವರೆಲ್ಲರೂ ಹುಚ್ಚರು ಎನ್ನಬಹುದೆ? ಹಿಂದೆ ನಡೆದ ಕತೆಯಿಂದ ಮುಂದಿನ ಕತೆ ಸೂಚಿತವಾಗುವುದು; ಹಿಂದೆ ಎಲ್ಲವೂ

ಸರಿಹೋಗಲಿಲ್ಲ. ಆದ್ದರಿಂದ ಮುಂದೂ ಹೋಗಲಿಕ್ಕಿಲ್ಲ ಎಂದು ನಮಗೆ ಒಳ ಕುದಿಯೆ ? ಅಥವಾ—

ಮಾಧವನ ನೆನಪಿನಿಂದ ನಮಗೀ ಅವಸ್ಥೆಯಾಗಿದೆಯೆ ? ಯಾಕೆ ? ಮಾಧವನ ಇಂದಿನ ಅವಸ್ಥೆಯನ್ನು ನೋಡಿ ನಮಗಾಗಿ ನಮಗೆ ನಾಚಿಕೆ ಯಾಗಿದೆಯೆ ? ಅಂದು ಆಡಿದಂತೆ ಇಂದಿಗೂ ನಡೆದವನು ಮಾಧವನೊಬ್ಬನೆ! ಅದಕಾಗಿ ನಮಗೆ ಅಸಹ್ಯವಿದೆಯೆ ?

ಯಾಕೆ ? ಯಾಕೆ ? ಯಾಕೆ ?... ಮುವ್ವರೂ ನಿರುತ್ತರರಾದವರಂತೆ ಗಕ್ಕನೆ ನಿಂತರು. ಎದುರು ಮಾಧವನು ವಾಸ ಮಾಡುತ್ತಿರುವ ಕಟ್ಟಡ. ಮುಖವೆತ್ತಿ ನೋಡಿದರು. ಮಾಧವನ ಕೋಣೆಯಲ್ಲಿ ದೀಪವಿಲ್ಲ, ಇದೇನು ? ನಾವು ಬರುವುದನ್ನು ಮರೆತು ಸಭೆಗೆ ಹೋಗಿರಬಹುದೆ ?

ಮುವ್ವರೂ ಪಾವಟಿಗೆಗಳನ್ನು ಹತ್ತಿದರು. ಮೇಲೇರುವಾಗ ಮುವ್ವರಿಗೂ ಒಂದೇ ವಿಚಾರ. ಆದದ್ದಾಗಿ ಹೋಯಿತು. ಇಂದಾದರೂ ಪ್ರಾಮಾಣಿಕವಾಗಿ ಒಪ್ಪಿಕೊಳ್ಳೋಣ. ಮಾಧವನಂತಹರು ಪ್ರಾರಂಭಕ್ಕೆ ಚಳವಳದಲ್ಲಿ ಸೇರಿದ್ದರಿಂದ ನಲವತ್ತು ಕೋಟಿ ಜನಸಂಖ್ಯೆಯ, ನಾನೂರು ಜಾತಿಗಳುಳ್ಳ ಸಮಾಜದ, ನೂರೈವತ್ತು ವರ್ಷಗಳ ಅಭಿಮಾನಶೂನ್ಯತೆಯ ಹಿಂದುಸ್ತಾನಕ್ಕೆ ಕೇವಲ ೨೭ ವರ್ಷಗಳಲ್ಲಿ ಸ್ವಾತಂತ್ರ್ಯ.

"Congratulations" ಎನ್ನುತ್ತ ಮುವ್ವರೂ ಬಾಗಿಲನ್ನು ತೆರೆದರು.

ಒಳಗೆ ಕತ್ತಲೆ. ಹಮ್ಮೂನು "ಹಾರ ಹಾಕುವೆ ಬಾರೊ ನನ ವೀರಾ" ಎಂದು ಅಣಕಿನ ದನಿಯಲ್ಲಿ ಹಾಡುತ್ತ ದೀಪ ಹಚ್ಚಿದನು. "ಕಿಟಕಿಯೊಳಗ ಹಣಿಕಿ ಹಾಕಿ ಕೈಯಿಂದ ಧ್ವಜ ಹಿಡಿದಾನ ನೋಡ್ರಿ, ಸ್ವಾತಂತ್ರ್ಯದ ಖಾತ್ರಿ ಆಗಲಿ ಅಂತ" ಎಂದು ನಗೆಯಾಡಿದ ಅನಂತ. ಕೊನೆಯ ವಾಕ್ಯವನ್ನು ನುಡಿದವನು ಶ್ರೀಧರ. ಮೊದಲು ಮಾಧವನ ಭುಜ ತಟ್ಟಿದನು; ಕೂಡಲೆ "ಕೈಯಲ್ಲಿ ಧ್ವಜವಿದ್ದೇನು ? ದೇಹದಲ್ಲಿ ಜೀವವೆ ಇಲ್ಲ!"

———

# ಲಲಿತ ಸಾಹಿತ್ಯಮಾಲೆ, ಧಾರವಾಡ

ವರುಷದಲ್ಲಿ ಆರು ನೂರು ಪುಟದ ಸಾಹಿತ್ಯ

ಚಂದಾ : ರಜಿಸ್ಟರ ಅಂಚೇವೆಚ್ಚ ಸೇರಿ ೫ ರೂಪಾಯಿ ಮಾತ್ರ

| | | | | |
|---|---|---|---|---|
| ೧ | ಚಿಗುರು | ಡಿ\| ಸೌ. ಗೌರಮ್ಮ | (೨ನೇ ಮು.) | ೧ ೪ ೦ |
| ೨ | ಅಕ್ಕಾಜಿ | ಶರಚ್ಚಂದ್ರ | ,, | ೧ ೪ ೦ |
| ೩ | ಕುಲದೀಪಕರು | ಸಿದ್ಧವನಹಳ್ಳಿ | ,, | ೦ ೮ ೦ |
| ೪ | ಸಾಹಿತ್ಯರತ್ನ | ಅ. ನ. ಕೃಷ್ಣರಾಯ | ,, | ೪ ೦ ೦ |
| ೫ | ಮುದ್ದಿನ ಕಣಿ | ಚಕ್ಕೊವ್ಥ | (೨ನೇ ಮು.) | ಅಚ್ಚಿನಲ್ಲಿ |
| ೬ | ಸುಮತಿ, ಅನುರಾಧಾ | ಶರಚ್ಚಂದ್ರ | ,, | ,, |
| ೭ | ಡೊಂಕುಬಾಲ | ನಾ. ಕಸ್ತೂರಿ | ,, | ,, |
| ೮ | ಕಸ್ತೂರಿ | ಶ್ರೀಮತಿ 'ವಾಣಿ' | | ೧ ೪ ೦ |
| ೯ | ಶೈಲಾಜಿ | ಏಕಾಂಕಗಳ ಸಂಗ್ರಹ | | ೧ ೪ ೦ |
| ೧೦ | ಇಂದಿನ ಕರ್ನಾಟಕ | ಸಂ : ವಿ. ಕೃ. ಗೋಕಾಕ | | ೧ ೮ ೦ |
| ೧೧ | ಹಕ್ಕಿಯ ನೋಟ | ದತ್ತಾತ್ರೇಯ | | ೦ ೧೨ ೦ |
| ೧೨ | ಗೃಹಿಣಿ | ಡಿ. ಹನುಮಂತರಾವ್ | | ೧ ೮ ೦ |
| ೧೩ | ಕವಿವರ ಬೇಂದ್ರೆ | ಲೇಖನಗಳು | | ೧ ೮ ೦ |
| ೧೪ | ನಿರ್ಮಲಾ | ಡಿ\| ಪ್ರೇಮಚಂದ | | ೩ ೦ ೦ |
| ೧೫ | ಕೊನೆಯ ದಿನಗಳು | ಭಾರತೀಸುತ | | ೧ ೮ ೦ |
| ೧೬ | ಕಳ್ಳಸಂತೆ | ಬೇಂದ್ರೆ ಲಕ್ಷ್ಮಣರಾಯರು | | ೧ ೦ ೦ |
| ೧೭ | ಮುರುಕು ಮಂಟಪ | ಅನಂತನಾರಾಯಣ | | ೧ ೧೨ ೦ |
| ೧೮ | ಪುರುಷಾರ್ಥ | ಶ್ರೀರಂಗ | | ೨ ೦ ೦ |
| ೧೯ | ಪ್ರತಿ ಸರಕಾರ | ಮಿರ್ಜಿ ಅಣ್ಣಾರಾಯ | | ಅಚ್ಚಿನಲ್ಲಿ |
| ೨೦ | ಎರಡನೆಯ ಸಂಬಂಧ | ಎನ್ಕೆ ಕುಲಕರ್ಣಿ | | ,, |

**ಮನೋಹರ ಗ್ರಂಥ ಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾವಿ**